

ತನು ನಿನ್ನದು ಜೀವನ ನಿನ್ನದೋ ॥ ಪ ॥
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ॥ ಅ. ಪ ॥

ಸವಿನುಡಿ ವೇದಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದೊ
ನವ ಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ –1–

ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ –2–

ಮಾಯಾ ಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವೊ
ಕಾಯಜ ಜನಕ ಒಡೆಯ ಆದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೇ –3–

ಶ್ರೀ ಕನಕದಾಸರು.

ಸಂಪರ್ಕಿಸಿ ಆನಂ।

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ



### ವಾರ್ಷಿಕ ಬ್ರಹ್ಮೋತ್ಸವಗಳು 13-9-88 ರಿಂದ 22-9-88 ವರೆಗೆ

| | | | |
|---|---|---|---|
| 13-9-88 | ಮಂಗಳವಾರ | - — | ಅಂಕುರಾರ್ಪಣೆ |
| 14-9-88 | ಬುಧವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 15-9-88 | ಗುರುವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 16-9-88 | ಶುಕ್ರವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ |
| 17-9-88 | ಶನಿವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 18-9-88 | ಭಾನುವಾರ | ಮೋಹಿನೀ ಅವತಾರ | ಗರುಡವಾಹನ |
| 19-9-88 | ಸೋಮವಾರ | ಹನುಮದ್ವಾಹನ, ಸಂಜೆ-ವಸಂತೋತ್ಸವ | ಗಜವಾಹನ |
| 20-9-88 | ಮಂಗಳವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 21-9-88 | ಬುಧವಾರ | ರಥೋತ್ಸವ | ಅಶ್ವವಾಹನ |
| 22-9-88 | ಗುರುವಾರ | ಅವಭೃಥೋತ್ಸವ | ಧ್ವಜಾವರೋಹಣ. |

ಸೂಚನೆ:— ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿನಿತ್ಯ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ವಿವರಗಳಿಗಾಗಿ ನಿಮ್ಮ ಬಳಿಯ ತಿ. ತಿ. ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

**ತಿ. ತಿ. ದೇ.**




ಗೌರವ ಸಂಪಾದಕರು :

ಶ್ರೀ ಸಿ.ಹೆಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :

ಕೆ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥


**ಸಂಪುಟ ೧೯] ಸೆಪ್ಟಂಬರ್ ೧೯೮೮ [ಸಂಚಿಕೆ ೪**


# ವಿಷಯಸೂಚಿ



ಮುಖಚಿತ್ರ : ಆಲದೆಲೆಯ ಶ್ರೀಕೃಷ್ಣ

ಹಿಂಬದಿಯಲ್ಲಿ : ಶ್ರೀ ಗಣಪತಿ

# ಸಂಪಾದಕೀಯ

ಕಲಿಯುಗದ ಪ್ರತ್ಯಕ್ಷ ದೈವವೆಂದು ಕೊಂಡಾಡಲ್ಪಡುವ ಶ್ರೀವೆಂಕಟೇಶ್ವರ ಸ್ವಾಮಿಯ ನೆಲೆಯಾದ ತಿರುಮಲೆಯಲ್ಲಿ ನಿತ್ಯಕಲ್ಯಾಣ ಪಚ್ಚ ತೋರಣ. ದಿನ ವೊಂದಕ್ಕೆ 25 ರಿಂದ 30 ಸಾವಿರ ಮಂದಿ ಭಕ್ತರು ಸಂಕಟ ಹರಣನ ಸನ್ನಿಧಿಯಲ್ಲಿ ಶಾಂತಿಯನ್ನು ಸುಖವನ್ನು ಬಯಸಿ ತಿರುಮಲೆಗೆ ಆಗಮಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಉತ್ಸವ, ಶನಿವಾರಗಳಲ್ಲಿ ಈ ಸಂಖ್ಯೆ ಲಕ್ಷವನ್ನು ಮೀರುವ ದಿನಗಳೂ ವರ್ಷದಲ್ಲಿ ಅನೇಕ. ಬ್ರಹ್ಮನೇ ಆರಂಭಿಸಿದ್ದೆಂದು ಪುರಾಣ ಪ್ರಸಿದ್ಧವಾದ ಉತ್ಸವ ಬ್ರಹ್ಮೋತ್ಸವದಲ್ಲಿಯಂತೂ ತಿರುಮಲೆ ಗೋವಿಂದನಾಮದ ಘೋಷದಲ್ಲಿ, ವೈಕುಂಠ ಪತಿಯ ವೈಭವವನ್ನು ನೋಡಬರುವ ಜನ ಸಂದೋಹದ ಸಂಭ್ರಮದಲ್ಲಿ, ಕಿಕ್ಕಿರಿಯುತ್ತದೆ ಆ ಭಗವಂತನ ಲೀಲಾವಿನೋದದಲ್ಲಿ ಪಾಲುಗೊಳ್ಳಲು ಬರುವ ಜನರ ಉತ್ಸಾಹ. ಕಾತರ. ಭಕ್ತಿ. ಗೌರವಗಳನ್ನು ನೋಡಿಯೇ ತಿಳಿಯಬೇಕು–ಎಂತಲೇ ದಾಸರು ಹಾಡಿದ್ದು–ನಿನ್ನ ನೋಡಲು ಬಂದವನಲ್ಲವೊ ನಿನ್ನ ಭಕ್ತರ ಚರಣ ದರುಶನ ಮಾಡಬಂದೆ.

ಹೀಗೆ ಹೆಚ್ಚಿದ ಜನ ಸಮೂಹದ ಅಗತ್ಯಗಳನ್ನು ಪೂರೈಸುವ ವ್ಯವಸ್ಥೆಯೇ ದೊಡ್ಡದು. ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವರ್ಗವೂ ಈ ಮಾನವ ಸೇವೆಯಲ್ಲಿ–ಮಾಧವ ಸೇವೆಯಲ್ಲಿ ಅರ್ಪಣಾ–ಮನೋಭಾವದಿಂದ ಅಹರ್ನಿಶಿ ಕೆಲಸ ಮಾಡುತ್ತಿದೆಯೆಂದು ಹೇಳಬೇಕು. ಮೊದಲು ಬಂದುವರಿಗೆ ಮೊದಲು ಸೂತ್ರದಲ್ಲಿ ಉಚಿತ, ಬಾಡಿಗೆ. ಕೋಣೆಗಳನ್ನು ನೀಡುವುದರಿಂದ ಹಿಡಿದು, ಭಕ್ತರು ಭಗವಂತನ ದರ್ಶನ ಪಡೆಯಲು ನಿರಾತಂಕವಾಗಿ, ಶಾಂತವಾಗಿ, ಸರದಿ ಹಿಡಿದು ಹೋಗಿ ಬರುವವರೆಗೆ ವ್ಯವಸ್ಥಿತವಾಗಿ ಎಲ್ಲ ನಡೆಯುವಂತೆ ಏರ್ಪಾಡುಗಳನ್ನು ಮಾಡುವುದು ದೈನಂದಿನವೇ ಆದರೂ ಬ್ರಹ್ಮೋತ್ಸವಗಳಲ್ಲಿ ಇಮ್ಮಡಿ ಮುಮ್ಮಡಿ ವ್ಯವಸ್ಥೆಯ ಏರ್ಪಾಡುಗಳಿಗೆ ಹೆಚ್ಚು ಹೆಚ್ಚು ಕ್ರಮಗಳನ್ನು ತೆಗೆದು ಕೊಳ್ಳಲಾಗುತ್ತದೆ. ಹಿಂದಿನ ವರ್ಷಗಳ ಅನುಭವದಿಂದ ಉಂಟಾಗಬಹುದಾದ ಅಡ್ಡಿ ಅಡಚಣೆಗಳನ್ನು ಮುಂದಾಗಿಯೇ ಊಹಿಸಿ ನಿವಾರಿಸಲು ಹೊಸ ಹೊಸ ಉಪಾಯಗಳನ್ನು ಹೂಡಲಾಗುತ್ತಿದೆ.

ಆರೋಗ್ಯ, ಪರಿಶುಭ್ರತೆ, ನೈರ್ಮಲ್ಯಗಳನ್ನು ಕಾಪಾಡಲು ಹೆಚ್ಚಿನ ಸಿಬ್ಬಂದಿ, ಸಲಕರಣೆಗಳನ್ನು ಒದಗಿಸಿ, ಸಂಚಾರ ನಿಯಂತ್ರಣವನ್ನು ಹೆಚ್ಚು ವ್ಯವಸ್ಥೆಗೊಳಿಸಿ, ಹೆಚ್ಚಿನ ರಕ್ಷಣಾಜಾಲವನ್ನು ನಿರ್ಮಿಸಿ, ಹೆಚ್ಚು ಹೆಚ್ಚಿನ ಸುಂದರ, ಶಾಂತಿಯ ವಾತಾವರಣವನ್ನುಂಟುಮಾಡಲು ಹೆಚ್ಚು ಹೆಚ್ಚಿನ ಪುಷ್ಪಾಲಂಕರಣ, ವಿದ್ಯುದ್ದೀಪಾಲಂಕರಣಗಳತ್ತ ವಿಶೇಷ ಗಮನ ನೀಡಲಾಗಿದೆ.

ಯಾತ್ರಿಕರಿಗೆ ಬ್ರಹ್ಮೋತ್ಸವ ಸಮಯದಲ್ಲಿ ತಿರುಮಲೆಯಲ್ಲಿ ಇತರ ಸೌಕರ್ಯಗಳನ್ನೂ ಏರ್ಪಡಿಸಲಾಗಿದೆ. ದಾಸಸಾಹಿತ್ಯ, ಅನ್ನಮಾಚಾರ್ಯ ಪ್ರಾಜೆಕ್ಟ್ ಸಾಹಿತ್ಯ ವಸ್ತು ಪ್ರದರ್ಶನಗಳು, ಫಲಪುಷ್ಪ ಪ್ರದರ್ಶನಗಳೊಡನೆ ತಿ. ತಿ ದೇ. ಧಾರ್ಮಿಕ ಗ್ರಂಥ ಮಾರಾಟವನ್ನು ಏರ್ಪಾಡು ಮಾಡಲಾಗಿದೆ. ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನದ ಉಚಿತ ಭೋಜನ ವ್ಯವಸ್ಥೆಯನ್ನು 10 ರಿಂದ 12 ಸಹಸ್ರಕ್ಕೆ ಏರಿಸಲಾಗಿದೆ. ಕುಡಿಯುವ ನೀರಿನ ಸೌಲಭ್ಯವನ್ನು ವ್ಯಾಪಕವೂ ವ್ಯವಸ್ಥಿತವೂ ಆಗುವಂತೆ ಮಾಡಲಾಗಿದೆ.

ಯಾತ್ರಿಕರ ಸುಲಭ ಸಂಚಾರಕ್ಕಾಗಿ ತಿರುಪತಿ ತಿರುಮಲೆಗಳ ನಡುವೆ ಹೆಚ್ಚಿನ ಬಸ್ ಸಂಚಾರದ ಏರ್ಪಾಡು ಮಾಡಲಾಗಿದ್ದು, ಬೇರೆ ಬೇರೆ ಊರುಗಳಿಂದಲೂ ವಿಶೇಷ ಬಸ್‌ಗಳನ್ನು ಏರ್ಪಡಿಸುವ ವ್ಯವಸ್ಥೆ ಕೈಗೊಳ್ಳಲಾಗುತ್ತಿದೆ. ಹೆಚ್ಚಿನ ರೈಲುಪ್ರಯಾಣ ಸೌಲಭ್ಯಕ್ಕಾಗಿಯೂ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

ಬ್ರಹ್ಮೋತ್ಸವದ ದಿನಗಳಲ್ಲಿ ಹೆಚ್ಚಿನ ಯಾತ್ರಿಕರ ಅಗತ್ಯಗಳನ್ನು ಗಮನಿಸುವುದೇ ಅಲ್ಲದೆ ಹೆಚ್ಚು ಶಾಶ್ವತವಾದ ಕೆಲಸಗಳನ್ನೂ ಕೈಗೆತ್ತಿಕೊಳ್ಳಲಾಗುತ್ತದೆ. ತಿರುಮಲೆಯಲ್ಲಿ ಎಲ್ಲೆಡೆ ಬಣ್ಣದ ದೀಪಗಳನ್ನು ಹಾಕಿ ಬೆಳಕನ್ನು ಹೆಚ್ಚುಗೊಳಿಸಲಾಗಿದೆ. ತಿರುಮಲೆಯ ರಸ್ತೆಗಳನ್ನು ಬಹುಮಟ್ಟಿಗೆ ಅಭಿವೃದ್ಧಿಗೊಳಿಸಲಾಗಿದೆ. ಕಾಲುಹಾದಿಯ ಯಾತ್ರಿಕರಿಗೆ ನೀರು, ನೆರಳು, ಅಲ್ಪೋಪಹಾರ ಸೌಲಭ್ಯಗಳನ್ನು ಕಲ್ಪಿಸಲಾಗಿದ್ದು, ವಾಹನ ಸಂಚಾರದ ರಸ್ತೆಯನ್ನೂ ಅಭಿವೃದ್ಧಿ ಗೊಳಿಸಲಾಗಿದೆ. ತಿರುಪತಿಯಲ್ಲೂ ರೇಣಿಗುಂಟ ಕಡೆಯ ರೈಲುಸೇತುವೆಯಿಂದ ಕಪಿಲತೀರ್ಥದ ರಸ್ತೆಯನ್ನು, ಕಪಿಲತೀರ್ಥದಿಂದ ಅಲಿಪಿರಿಯವರೆಗಿನ ದ್ವಿಮುಖ ಸಂಚಾರ ರಸ್ತೆಯನ್ನು ಅಭಿವೃದ್ಧಿಗೊಳಿಸಲಾಗಿದ್ದು, ಸತ್ರಗಳ ರಸ್ತೆಯನ್ನು ದುರಸ್ತಿಗೊಳಿಸಲಾಗುತ್ತಿದೆ.

ಇಷ್ಟಾದರೂ ಯಾತ್ರಿಕರ ಸಹಕಾರ ಅಗತ್ಯ. ಯಾವುದೇ ವ್ಯವಸ್ಥೆಯಲ್ಲೂ ಅದರ ಪ್ರಯೋಜನ ಪಡೆಯುವರು ಅದರೊಡನೆ ಸಹಕರಿಸಿದಾಗಲೇ ಅದು ಸಾರ್ಥಕವಾಗುತ್ತದೆ ಎಂಬುದು ಮುಖ್ಯ. ತಿ. ತಿ. ದೇ. ಗಳ ಮಾನವ ಸೇವಾ–ಯಾತ್ರಿಕ ಸೇವಾ–ಕಾರ್ಯದಲ್ಲಿ ಸಹಕಾರವನ್ನಿತ್ತು ಮತ್ತೂ ಹೆಚ್ಚಿನ ಪ್ರಯೋಜನ ಜನತೆ ಪಡೆಯಬೇಕು.

# ಕನ್ನಡ ಕಾವ್ಯಸಾಹಿತ್ಯದಲ್ಲಿ ಗಣಪತಿ

ಶ್ರೀ ಗಣಪತಿಯು ನಿರ್ವಿಘ್ನಕಾರಕ. ಅವನನ್ನು ಎಲ್ಲರೂ ಆರಾಧಿಸಿ ತಮ್ಮ ತಮ್ಮ ಕಾರ್ಯಗಳಲ್ಲಿ ನಿರ್ವಿಘ್ನತೆಯನ್ನು ಪಡೆದಿದ್ದಾರೆ; ಪಡೆಯುತ್ತಿದ್ದಾರೆ. ಕವಿಗಳೂ ಸಹ ಕಾವ್ಯಗಳ ಪ್ರಾರಂಭದಲ್ಲಿ ಶ್ರೀ ಗಣಪತಿಯನ್ನು ಸ್ತುತಿಸಿ ಅವನ ಅನುಗ್ರಹವನ್ನು ಪಡೆದು ತಮ್ಮ ಕಾವ್ಯವನ್ನು ನಿರ್ವಿಘ್ನವಾಗಿ ಮಂಗಳಗೊಳಿಸಿದ್ದಾರೆ, ಅಮರವನ್ನಾಗಿಸಿದ್ದಾರೆ. ಎಲ್ಲರೂ ಒಬ್ಬ ಗಣಪತಿಯನ್ನೇ ಸ್ತುತಿಸಿರುವರಾದರೂ, ತಮ್ಮ ಕವಿತಾ ಕೌಶಲಕ್ಕೆ ತಕ್ಕಂತೆ ಗಣಪತಿಯಲ್ಲಿರುವ ವಿಶೇಷ ಶಕ್ತಿಯನ್ನೋ ವಿಶೇಷ ರೂಪವನ್ನೋ ವರ್ಣಿಸಿ ತಮ್ಮ ಪ್ರೌಢಿಮೆಯನ್ನು ಪ್ರದರ್ಶಿಸಿದ್ದಾರೆ. ಈಗ ಕನ್ನಡದ ಕೆಲವು ಕಾವ್ಯಗಳಲ್ಲಿ ಕವಿಗಳು ಯಾವರೀತಿ ಗಣೇಶನನ್ನು ಕಂಡಿದ್ದಾರೆ ಎಂಬುದನ್ನು ನೋಡೋಣ.

## ವಿನಾಯಕ

ಆದಿಕವಿ ಪಂಪನು ಗಣಪತಿಯನ್ನು 'ವಿನಾಯಕನ' ರೂಪದಲ್ಲಿ ಕಂಡು ತನ್ನ ಕಾವ್ಯಕ್ಕೆ ನಿರ್ವಿಘ್ನತೆಯನ್ನು ಪ್ರಾರ್ಥಿಸಿದ್ದಾನೆ ಅದು ಹೀಗೆ—

ಎನ್ನ ದಾನ ಮದಾಗಳಿಂ ಮಧುಪಾಶ್ರಯಂ
ಧರೆಗನ್ಯವ।
ಚ್ಛಿನ್ನ ದಾನಮದಾಗಳಿಂ ವಿಧುದಾಶ್ರಯಂ
ಗೆಲೆವಂಡನೆ।
ನ್ನನ್ನಿ ಜೋನ್ನತಿಯಿಂ ಭುವೀಪತಿಯೆಂದು
ಮೆಚ್ಚಿ ವಿನಾಯಕಂ।
ಕಾನ್ನಿಮಿರ್ಚುಗೆ ಕಬ್ಬಮಂ ನಯದಿಂ
ಗುಣಾರ್ಣವ ಭೂಪನಾ॥

ಮದೋದಕವು ದುಂಬಿಗಳಿಗೆ ತೃಪ್ತಿಯನ್ನುಂಟು ಮಾಡುವಂತೆ, ತನ್ನ ದಾನಗಳಿಂದ ವಿದ್ವಾಂಸರನ್ನು ತೃಪ್ತಿಪಡಿಸುತ್ತಿರುವ ಈ ಅರಿಕೇಸರಿಯು, ಶತ್ರುಗಳನ್ನು ತನ್ನ ಕೃಪೆಯಿಂದಲೇ ಗೆದ್ದನು—ಎಂದು ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಿರುವ ವಿನಾಯಕನು ಗುಣಾರ್ಣವನ ಪ್ರಶಂಸಾರೂಪವಾದ ಈ ಕಾವ್ಯವನ್ನು ತಾನೇ ಪೂರ್ಣಗೊಳಿಸಲಿ—ಎಂದು ಮೇಲಿನ ಪದ್ಯದಲ್ಲಿ ಪಂಪ ಪ್ರಾರ್ಥಿಸಿದ್ದಾನೆ. ಸಂಸ್ಕೃತ ಮಹಾಭಾರತವನ್ನು ವ್ಯಾಸರು ಹೇಳುತ್ತಿದ್ದರೆಂದೂ, ಗಣಪತಿಯು ಅದನ್ನು ಬರೆಯುತ್ತಿದ್ದನೆಂದೂ ಪ್ರತೀತಿಯುಂಟಷ್ಟೆ. ಆ ಗಣಪತಿಯ ವಿಷಯದಲ್ಲಿ ಪಂಪನಿಗೂ ಭಕ್ತಿ ಮೂಡಿ ತನ್ನ ಕಾವ್ಯಕ್ಕೆ ಸತ್ ಪ್ರೇರಣೆ ಮಾಡುವುದರ ಮೂಲಕ ಅವನೇ ಈ ಕಾವ್ಯವನ್ನು ನಿಮಿರ್ಚಲಿ ಎಂದು ಕೇಳಿಕೊಳ್ಳುತ್ತಾನೆ.

ಶ್ರೀ ಕೆ. ಜಗನ್ನಾಥಶಾಸ್ತ್ರಿ

## ಅರಿರೌದ್ರಮ್

ರುದ್ರಭಟ್ಟನು ತನ್ನ "ಜಗನ್ನಾಥ ವಿಜಯ" ಕಾವ್ಯದಲ್ಲಿ ಗಣಪತಿಯನ್ನು ಅರಿರೌದ್ರನನ್ನಾಗಿ ಕಂಡಿದ್ದಾನೆ.

ಅರಿ ರೌದ್ರಂ ಕರದೈರ್ಘ್ಯ ಮುಲ್ಲಸದಹೀ
ನಾಲಂಕೃತಂ ಮೂರ್ತಿ ಸಾ।
ಕ್ಷರ ಸೇವ್ಯಂ ನಿಜ ವಿಸ್ಮೆ ವಿಶ್ವವಿನುತಂ ಪಾದಂ
ಸದಾಳಿ ಪ್ರಿಯಂ।
ಪರ ದಾನಂ ನತ ಭದ್ರ ಲಕ್ಷಣ ಪದಂ
ಪದ್ಮಾನುಷಂಗಿತ್ವಂ ಮಾ।
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ
ಭೂ ಚಕ್ರಮಂ॥

ಇವನ ಗಣಪತಿಯೇನೋ ಅರಿ ರೌದ್ರನ್. ಅವನ ಕರಗಳೂ ದೀರ್ಘ. ಹಾಗೆಂದು ಯಾರೂ ಅವನನ್ನು ನೋಡಿ ಹೆದರಿಕೊಳ್ಳಬೇಕಾಗಿಲ್ಲ. ಏಕೆಂದರೆ ಅವನು ಉಲ್ಲಸತ್ ಅಹೀನಾಲಂಕೃತ ಮೂರ್ತಿ. ರೌದ್ರದಲ್ಲಿ ಶಾಂತತೆಯನ್ನು ಮೂಡಿಸುವುದು ಎಷ್ಟು ಸಹಜ ಎನ್ನುವುದನ್ನು ತೋರಿಸಿ ತನ್ನ ಅಸಾಧಾರಣ ಪದ ಜೋಡಣಾ ಕುಶಲತೆಯನ್ನೂ ಭಾವವ್ಯಂಜಕ ಶಕ್ತಿಯನ್ನೂ ರುದ್ರಭಟ್ಟ ತೋರಿಸಿದ್ದಾನೆ.



## ಆನಂದ ವೇಷಂ

ಹರಿಹರ ಕವಿ ತನ್ನ 'ಗಿರಿಜಾ ಕಲ್ಯಾಣ' ಕಾವ್ಯದ ನಿರ್ವಿಘ್ನತೆಗಾಗಿ "ಆನಂದ ವೇಷ"ನಾದ ಗಣಪತಿಯನ್ನೇ ಪ್ರಾರ್ಥಿಸುತ್ತಾನೆ.

ಎನ್ನೀ ಕಾವ್ಯಕ್ಕೆ ನಿರ್ವಿಘ್ನದಿನ್ ಅತುಳ
ನವೀನಾರ್ಥ ವಾಕ್ಯ ಪ್ರಸನ್ನೋ
ತ್ಪನ್ನಾಲಂಕಾರಮಂ ಮಾಡುಗೆ ವಿಪುಲ
ಕಪೋಲ ಸ್ಥಳಾಂತ ಸ್ಥಳೀ ಸಂ।
ಭಿನ್ನೋದ್ಯದ್ದಾನ ಧಾರಾ ಪ್ರಬಳ ಪರಿಮಳಾ
ಸಕ್ತ ಭೃಂಗಾವಳೀ ಸಂ।
ಪನ್ನ ಪ್ರೋದ್ಭೂತ ಝುಂಕಾರಿತ ರವ ಮುದಿತಾ
ನಂದವೇಶಂ ಗಣೇಶಂ॥

ತನ್ನ ಕಪೋಲದ ಮದೋದಕದಿಂದ ಮತ್ತವಾದ ದುಂಬಿಗಳ ಝೇಂಕಾರವನ್ನು ಕೇಳುತ್ತಾ ಆನಂದದಲ್ಲಿ ಮಗ್ನನಾದ ಗಣಪತಿಯ ರೂಪ, ನಿಜಕ್ಕೂ ಪ್ರಸನ್ನತೆಯ ರೂಪವೇ ಆಗಿದೆ. ಈ ಗಣಪತಿ ಅವನ ಕಾವ್ಯಕ್ಕೆ ನಿರ್ವಿಘ್ನತೆಯನ್ನು ಉಂಟು ಮಾಡಲೇಬೇಕಲ್ಲವೇ?

## ನಾಗಪತಿ

ಪಾರ್ಶ್ವನಾಥ ಪಂಡಿತನು ಗಣಪತಿಯನ್ನು 'ನಾಗಪತಿ' ಎಂದು ಸಂಬೋಧಿಸುತ್ತಾನೆ. ಇವನ ನಾಗಪತಿಯು ಸಾಹಸ್ಯೈಕನಿಧಿ, ಸಜ್ಜನ ಪೂಜ್ಯಗುಣ ಪ್ರಕಾಶಕ. ಅಷ್ಟೇ ಅಲ್ಲ, ಅವನು ಪಾರ್ಶ್ವಜಿನನ ಪ್ರಬೋಧ ಸಿದ್ಧಿಗೆ ನೆರವಾದವನು.

ಅಗಣಿತ ಸಾಹಸ್ಯೈಕ ನಿಧಿ
ಸಜ್ಜನ ಪೂಜ್ಯಗುಣ ಪ್ರಕಾಶಕಂ।
ಮಿಗೆ ಕಮಠೋಪಸರ್ಗಮನಂಡಂಗಿಸಿ
ಪಾರ್ಶ್ವಜಿನ ಪ್ರಬೋಧ ಸಿ।
ದ್ಧಿಗೆ ನೆರವಾದ ಮಾಳ್ಕೆಯೊಳ್
ತಜ್ಜಿನನಾಥ ಕಥಾಪ್ರಬಂಧ ಸಿ।
ದ್ಧಿಗೆ ನೆರಮಕ್ಕೆ ನಾಗಪತಿ
ಮಾಡಿ ಮದೀಯಮನ ಪ್ರಶಸ್ತಿಯಂ॥

ಜಿನನಾಥನ ಜ್ಞಾನ ಸಿದ್ಧಿಗೆ ನೆರವಾದ ಆ ನಾಗಪತಿಯೇ ತನಗೂ ಕಾವ್ಯಜ್ಞಾನ ಸಿದ್ಧಿಯನ್ನು ಕೊಡಲಿ—ಎಂದು ಅನನ್ಯ ಶರಣತೆಯಿಂದ ಪ್ರಾರ್ಥಿಸುತ್ತಾನೆ.

## ನರ್ತನಾವಲೋಕಿ

ಸೋಮರಾಜನಿಂದ ಪ್ರಾರ್ಥಿಸಲ್ಪಡುವ ಗಣಪತಿಯನ್ನು ನೋಡೋಣ. ಅವನು ನರ್ತನವನ್ನು

ಅವಲೋಕಿಸುತ್ತಿರುವ "ಕರಿವದನ". ಅವನು ನರ್ತನವನ್ನು ಈಕ್ಷಿಸುವ ಓಲಗ ಶಾಲೆಯೇ ಒಂದು ವೈಶಿಷ್ಟ್ಯ ಪೂರ್ಣವಾದದ್ದು. ಅದು ಹೀಗಿದೆ

ಮಧು ಧಾರಾಸಕ್ತ ಭೃಂಗೀಕುಳದ ರವವೆ
ಗೀತಂ ಸ್ತುತಾವಾಮ್ನಾಯ ಸಂದೋ ।
ಹದ ನಾದಂ ವಾದ್ಯ ಮುಂಚತ್ಕರತಳ
ದೆಲರುಂಡೊಯ್ಯನಾಂದೋಳಿಸುತ್ತುಂ ।
ಪೊದಳ್ದು ದ್ಯದ್ಗರ್ಭ ಬದ್ಧೋರಗಿಯ ಗತಿ
ಅಸನ್ನರ್ತಕೀ ನೃತ್ಯಮಾಗಲ್ ।
ಮುದದಿಂದಾಲೋಕಿಸುತ್ತುರ್ಬುವ ಕರಿವದನಂ
ಕೂರ್ತು ರಕ್ಷಿಪ್ಪು ದೆನ್ನಂ ॥

ಮದಧಾರೆಯನ್ನು ಕುಡಿದು ಮತ್ತವಾದ ದುಂಬಿಗಳ ಧ್ವನಿಯೆ ಸಂಗೀತ, ವೇದಘೋಷಗಳೇ ವಾದ್ಯಗಳು, ಮೇಲೆತ್ತಿದ ಅಭಯ ಹಸ್ತದ ಗಾಳಿಯನ್ನುಂಡು ಓಲಾಡುತ್ತಿರುವ, ಹೊಟ್ಟೆಗೆ ಸುತ್ತಿಕೊಂಡಿರುವ ಸರ್ಪವೇ ನರ್ತಕಿ. ಇದನ್ನು ನೋಡುತ್ತ ಆನಂದ ಪಡುತ್ತಿರುವ ಗಣಪತಿ ನಮ್ಮನ್ನು ಕಾಪಾಡಲಿ. ಇಲ್ಲಿ ಸೋಮರಾಜನ ವರ್ಣನಾ ವೈಖರಿಯ ಗತ್ತು ಚೆನ್ನಾಗಿ ಫಲಿಸಿದೆ.

## ಉನ್ನತಮೂರ್ತಿ

ಚೌಂಡರಸ ಕವಿಗೆ ಗಣಪತಿಯು ಉನ್ನತ ಮೂರ್ತಿ, ಅಂದರೆ ಸರ್ವ ಶ್ರೇಷ್ಠ ಸಾಕಾರ ದೇವತೆ. ಏಕೆಂದರೆ ಅವನು ಇಂದ್ರ ಅಗ್ನಿ–ಮುಂತಾದ ಅಷ್ಟ ದಿಕ್ಪಾಲಕರಿಂದಲೂ, ಬ್ರಹ್ಮ ವಿಷ್ಣು ಶಿವ ಮುಂತಾದ ದೇವತೆಗಳಿಂದಲೂ, ನಮಸ್ಕರಿಸಲ್ಪಡುವನು. ಇವನು ಪಾರ್ವತಿಯ ಮಗ. ಇದನ್ನು ಹೀಗೆ ವರ್ಣಿಸುತ್ತಾನೆ–

ಪರಶು ಸ್ಪಣಿ ಪ್ರದೀಪ್ತರದ ಮೋದಕ
ರಾಜಿತ ಹಸ್ತನದ್ರಿಜಾ ।
ವರ ನಿಜಪುತ್ರನಿಂದ್ರ ಶಿಖಿಕಾಲ ಸುರಾರಿ
ಜಲೇಶ ವಾಯುಸಂ ।
ಕರ ಸಖ ರುದ್ರ ವಂದ್ಯನಹಿ ಭೂಷಣನುನ್ನತ
ಮೂರ್ತಿ ಮತ್ತ ಕುಂ ।
ಜರ ವದನಂ ಗಣೇಶನೆಮಗೀಗೆ ಮನೋರಥ
ಕಾರ್ಯ ಸಿದ್ಧಿಯಂ ॥

## ವಿದ್ಯೆವಾರಿಧಿ

ರೂಪಕ ಸಾಮ್ರಾಜ್ಯ ಚಕ್ರವರ್ತಿಯಾದ ಕುಮಾರವ್ಯಾಸನು ಮಹಾಭಾಗವತನು. ಜೊತೆಗೆ ಪದ ಶ್ರೀಮಂತಿಕೆಯಿಂದ ಮೆರೆದವನು. ಅವನ ಗಣಪತಿಯೂ ಸಹ ಶ್ರೀಮಂತ ಗಣಪತಿಯೇ. ಅವನ ಗಣಪನಿಗೆ ಯಾವ ಅಲಂಕಾರಕ್ಕೂ ಕೊರತೆಯಿಲ್ಲ. ಅವನ ಗಣಪತಿಯ ಮೌಳಿ ವರಮಣಿಗಳಿಂದಲೇ ಅಲಂಕೃತವಾದದ್ದು, ಅವನ ಹಣೆ ಸರಸಿಜಾರಿಯ ಕಿರಣದೋಳಿಯಿಂದಲೇ ರಚಿತವಾಗಿ ಸಿಂಧೂರದಿಂದ ಅಲಂಕೃತವಾದದ್ದು. ಹಣೆಯ ಅಂಚಿನಲ್ಲಿ ಕುಂತಳಗಳ ಕುಣಿತವಿದೆ. ವದನದ ಕಾಂತಿ ಕರಿನಿಭಾಕೃತಿಯದು. ಅಂದರೆ ಕರಿಯಂತೆಯೇ ಗಂಭೀರವಾದದ್ದು, ಗೌರವವಾದದ್ದು. ಆದರೆ ಅವನು ಬರೀ ಶ್ರೀಮಂತನೇ ಅಲ್ಲ, ವಿದ್ಯೆ ವಾರಿಧಿಯೂ ಹೌದು. ಇವನು ವಿದ್ಯೆಯಿಂದ ವಿನಯಪೂರ್ಣನಾಗಿದ್ದಾನೆ. ಆದ್ದರಿಂದಲೇ ಇವನನ್ನು ಅಜಹರಿ ರುದ್ರಾದಿಗಳು ಭಜಿಸುತ್ತಾರೆ. ಕವಿಯ ಮಾತಿನಿಂದಲೇ ಈ ಭಾವವನ್ನು ತಿಳಿಯೋಣ.

ವರ ಮಣಿಗಳಿಂದೆಸೆವ ಮೌಳಿಯ
ಸರಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರ ಭಾಳದಿ ಕುಣಿವ
ಕುಂತಳದ ।
ಕರಿನಿಭಾಕೃತಿ ಎನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿಯೆ ಮಾಡೆಮಗೆ
ನಿರ್ವಿಘ್ನದಾಯಕವ ॥
ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತ ಗಿರಿಯೊಡೆಯನ ಕುಮಾರನೆ
ವಿದ್ಯೆವಾರಿಧಿಯೆ ॥
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತ ಗಣಪ ಮಾಳ್ಪುದು
ಮತಿಗೆ ಮಂಗಳವ ॥

## ಭದ್ರಾಕೃತಿ

ಕುಮಾರವ್ಯಾಸನಂತೆಯೇ ಭಾವ ಹಾಗೂ ಪದ ಶ್ರೀಮಂತಿಕೆಯಿಂದ ಬಾಳಿದ ಮತ್ತೊಬ್ಬ ಕನ್ನಡದ ಕವಿ ಲಕ್ಷ್ಮೀಶ. ಇವನ ಗಣಪತಿ ಭದ್ರಾಕೃತಿಯುಳ್ಳವನು, ಅಂದರೆ ಅವನ ಆಕೃತಿಯೇ ಮಂಗಳವನ್ನುಂಟು ಮಾಡುವಂಥಾದ್ದು. ಅದು ಉದಯಗಿರಿಯಂತೆ ಗಂಭೀರವೂ ಶಾಂತಿದಾಯಕವೂ ಹೌದು.

ಗಣಪತಿಯ ದಂತದ ಕಾಂತಿಯೇ ಬೆಳಗಿನ ಮುಂಬೆಳಗು. ಸಿಂಧೂರದ ಕಾಂತಿಯೇ ಮೂಡಣದ ಕೆಂಪು. ಮಣಿ ಕಿರೀಟದ ಪ್ರಕಾಶವೇ ಹೊಂಬಿಸಿಲು–ಹೀಗೆ ಉದಯಗಿರಿಯ ಶಾಂತಿಯಂತೆ ಗಣಪತಿಯ ಆಕೃತಿಯನ್ನು ದರ್ಶಿಸಿದ ಲಕ್ಷ್ಮೀಶನ ಲೇಖನಿ ತನ್ನ ಸಾರ್ಥಕ್ಯವನ್ನು ಕಂಡಿದೆ. ಅವನ ಮಾತಿನಲ್ಲಿಯೇ ಅದನ್ನು ಅನುಭವಿಸೋಣ–

(33 ನೇಪುಟನೋಡಿ)

# ನಾಟಕರಂಗದಲ್ಲಿ ವಿನಾಯಕ

ವಕ್ರತುಂಡ ಮಹಾಕಾಯ
ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರುಮೇ ದೇವ
ಸರ್ವಕಾರ್ಯೇಷು ಸರ್ವದಾ ॥
ಪ್ರಣಮ್ಯ ಶಿರಸಾದೇವಂ
ಗೌರೀ ಪುತ್ರಂ ವಿನಾಯಕಂ ।
ಭಕ್ತಾ ವಾಸಂ ಸ್ಮರೇನ್ನಿತ್ಯಂ
ಆಯುಃಕಾಮಾರ್ಥ ಸಿದ್ಧಯೇ ॥

ಎಂದು ಮುಂತಾಗಿ ಸ್ತೋತ್ರಮಾಡಿ ಗಣಪತಿಯನ್ನು ಪೂಜಿಸುವರು. ಆತ ನಮ್ಮ ಕಾಮನೆಗಳನ್ನು ಪೂರೈಸುತ್ತಾನೆ. ನಮಗೆ ಸಿದ್ಧಿಯನ್ನು ನೀಡುತ್ತಾನೆ. ಆತ ವಿಘ್ನಕರ್ತನೂ ಹೌದು, ವಿಘ್ನಹರ್ತನೂ ಹೌದು. ವಿಘ್ನಗಳನ್ನು ಒಡ್ಡಿ ನಂತರ ನಮ್ಮ ಭಕ್ತಿಗೆ ಸಂತುಷ್ಟನಾಗಿ ಅದೇ ವಿಘ್ನಗಳನ್ನು ಪರಿಹರಿಸುತ್ತಾನೆ. ಹೀಗಾಗಿ ಯಾವದೇ ಶುಭಕಾರ್ಯವನ್ನು ಆರಂಭಿಸುವಾಗ ಗಣಪತಿಯನ್ನು ಮೊದಲು ಸ್ತುತಿಸಿ ಆ ಮೇಲೆ ಉಳಿದ ಕಾರ್ಯಕ್ರಮಗಳನ್ನು ನೆರವೇರಿಸುವುದು ಹಿಂದಿನಿಂದಲೂ ಬಂದ ರೂಢಿ.

ಕನ್ನಡದ ಕವಿಗಳು ತಮ್ಮ ಕಾವ್ಯದ ಆದಿಯಲ್ಲಿ ಗಣಪತಿಯನ್ನು ವಿಧವಿಧವಾಗಿ ಪ್ರಾರ್ಥಿಸಿದ್ದಾರೆ. ಕವಿ ಕುಮಾರವ್ಯಾಸನು ತನ್ನ ಗದುಗಿನ ಭಾರತದಲ್ಲಿ ಗಣಪತಿಯನ್ನು ಹೀಗೆ ಸ್ತುತಿಸಿದ್ದಾನೆ.

ವರಮಣಿಗಳಿಂದೆಸೆವ ಮೌಳಿಯ
ಸಗಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರ ಭಾಳದಿ
ಕುಣಿವಕುಂತಳದ
ಕರಿನಿಭಾಕೃತಿಯೆನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ
ನಿರ್ವಿಘ್ನದಾಯಕವ

ತೊರವೆ ರಾಮಾಯಣದ ಕರ್ತೃ ಕುಮಾರ ವಾಲ್ಮೀಕಿಯು ತನ್ನ ಕಾವ್ಯದಾದಿಯಲ್ಲಿ

ಉರುಲಲಾಟದಿ ನರ್ತಿಸುವ ಕಚ
ಭರದ ಕಮನೀಯ ಪ್ರಭಾವಿ
ಸ್ತರ ವಿನಾಯಕ ಮಾಡೆನಗೆ
ನಿರ್ವಿಘ್ನದಾಯಕವ

ಹೀಗೆಯೇ ಪಂಪ, ರುದ್ರಭಟ್ಟ, ಹರಿಹರ, ಚೇರಮಾಂಕ ಮೊದಲಾದ ಕವಿಗಳು ತಮ್ಮ ಕಾವ್ಯದಾದಿಯಲ್ಲಿ ಗಣಪತಿಯನ್ನು ಪ್ರಾರ್ಥಿಸಿದ್ದಾರೆ. ಭಾರತದ ರಂಗಭೂಮಿಯೂ ಕೂಡ ಗಣಪತಿ ಸ್ತುತಿಯಿಂದ ಹೊರತಾಗಿಲ್ಲ. ನಮ್ಮ ದೇಶದಲ್ಲಿರುವ ನಾನಾ ನೃತ್ಯ ಪ್ರಕಾರಗಳು, ನಾಟಕಗಳು, ಗೊಂಬೆಯಾಟ, ಬಯಲಾಟ, ಯಕ್ಷಗಾನ–ಇವೆಲ್ಲವುಗಳ ಪ್ರಾರಂಭದಲ್ಲಿಯೇ ಗಣಪತಿಗೆ ಪೂಜೆ ಸಲ್ಲುತ್ತದೆ.

ರಂಗಭೂಮಿಯಲ್ಲಿ ಗಣಪತಿಯ ಆರಾಧನೆ ಎಂದಿನಿಂದ ಪ್ರಾರಂಭವಾಯಿತೆಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಕ್ರಿ. ಶ. 6ನೇ ಶತಮಾನಕ್ಕೆ ಪ್ರಾರಂಭವಾದ ಗಣೇಶ ಪಂಥ ಕ್ರಿ ಶ. 10ನೇ ಶತಮಾನದ ಸುಮಾರಿಗೆ ಭಾರತದಲ್ಲೆಲ್ಲಾ ಜನಪ್ರಿಯವಾಯಿತೆಂಬುದು ಇತಿಹಾಸಕಾರರ ಅಭಿಪ್ರಾಯ. ಹೀಗಾಗಿ ಕ್ರಿ.ಶ. 10ನೇ ಶತಮಾನದ ಬಳಿಕವೇ ಭಾರತದ ರಂಗಭೂಮಿಯಲ್ಲಿ ಗಣಪತಿಯ ಪ್ರವೇಶವಾಗಿದ್ದಿರಬಹುದು. ಗಾಣಪತ್ಯರ ಪ್ರಭಾವ ಹೆಚ್ಚಾಗ ತೊಡಗಿದಂತೆ ರಂಗಭೂಮಿಯಲ್ಲಿ ಇಂದ್ರನಿಗೆ, ಶಿವ–ಪಾರ್ವತಿಯರಿಗೆ ಸಲ್ಲುತ್ತಿದ್ದ ಅಗ್ರಪೂಜೆ ನಂತರದ ಕಾಲದಲ್ಲಿ ಗಣಪತಿಗೆ ಸಲ್ಲತೊಡಗಿರಬೇಕು. ಕ್ರಿ.ಶ. 12ನೇ ಶತಮಾನದ ನಂದಿಕೇಶ್ವರನ ಅಭಿನಯದರ್ಪಣದಲ್ಲಿ – ನಾಟ್ಯಕಾರರು ನಾಟ್ಯ ಪ್ರಾರಂಭಿಸುವ ಮೊದಲು ಗಣೇಶನಿಗೆ ತಲೆಬಾಗಬೇಕೆನ್ನಲಾಗಿದೆ. ಇದಕ್ಕಿಂತ ಮೊದಲಿನ ಸಂಸ್ಕೃತ ನಾಟಕಗಳಲ್ಲಿ ಗಣೇಶ ಸ್ತುತಿ ಕಂಡು ಬರುವುದಿಲ್ಲ. ಕಾಳಿದಾಸ, ಶೂದ್ರಕ, ಹರ್ಷ ಮೊದಲಾದ ನಾಟಕಕಾರರು ತಮ್ಮ ನಾಟಕಗಳ ಪ್ರಾರಂಭದಲ್ಲಿ ಶಿವ–ಪಾರ್ವತಿಯರನ್ನು ಸ್ತುತಿಸಿದ್ದಾರೆ. 12ನೇ ಶತಮಾನದ ನಂತರದ ಎಲ್ಲ ನಾಟಕಗಳಲ್ಲಿ ಗಣೇಶಸ್ತುತಿಯನ್ನು ಮಾಡಲಾಗಿದೆ.

ರಂಗಭೂಮಿಯ ವಿವಿಧ ಪ್ರಕಾರಗಳಲ್ಲಿ, ವಿವಿಧ ಕಡೆಗಳಲ್ಲಿ ವಿಧವಿಧವಾಗಿ ಗಣಪತಿಯ ಆರಾಧನೆ ನಡೆಯುವುದು. ಸಾಮಾನ್ಯವಾಗಿ ರಂಗಸ್ಥಳಕ್ಕೆ ಗಣಪತಿಯ ಮುಖವಾಡವನ್ನು ಧರಿಸಿಬರುವುದೇ ಭಾರತದ ರಂಗಭೂಮಿಯ ಮುಖ್ಯ ಲಕ್ಷಣ.

ವಿವಿಧ ನೃತ್ಯ ಪ್ರಕಾರಗಳು:– ಮಧ್ಯಪ್ರದೇಶದ ಹಳ್ಳಿಗಳಲ್ಲಿಯ ಜನರು ತಮ್ಮ ಧಾರ್ಮಿಕ ಕಥಾನಕ ನೃತ್ಯಗಳಲ್ಲಿ ಆನೆಯ ಮುಖವಾಡ ಧರಿಸಿದ ಗಣಪತಿಯನ್ನು ರಂಗಸ್ಥಳದಲ್ಲಿ ತೋರಿಸುವ ರೀತಿ ವಿಶಿಷ್ಟವಾಗಿದೆ. ದೊಡ್ಡಹೊಟ್ಟೆಯ ಗಣಪತಿ ಕೆಲವೊಮ್ಮೆ ಹಾಸ್ಯದಿಂದ ಕುಣಿಯುವ ಶೈಲಿ ಆಹ್ಲಾದವನ್ನುಂಟು ಮಾಡುತ್ತದೆ ಎಂಬುದಾಗಿ ಮಧ್ಯಪ್ರದೇಶದ ನೆನಪುಗಳನ್ನು ಬರೆದ ಸರ್‌ಜಾನ್ ಮೋಲ್‌ಕೋಮ ಹೇಳಿದ್ದಾನೆ.

ತಮಿಳುನಾಡಿನ ಜಾನಪದ ಕಲೆಯಾದ 'ತೆರುಕುತ್ತು'ವಿನಲ್ಲಿ ಪ್ರಾರಂಭದಲ್ಲಿ ಸಂಗೀತಗಾರರು ಸ್ತುತಿ ಪದ್ಯ ಹಾಡುತ್ತಿರುವಂತೆ ಗಣಪತಿಯು ರಂಗಕ್ಕಾಗಮಿಸುತ್ತಾನೆ. ಕಥಾ ಪ್ರಸಂಗಕ್ಕಿಂತಲೂ ಮೊದಲು ನಡೆಯುವ ಗಣಪತಿಯ ನೃತ್ಯ ಪ್ರೇಕ್ಷಕರಲ್ಲಿ ಧಾರ್ಮಿಕ ಭಾವನೆ ಬೆಳೆಸಲು ಸಹಾಯಕಾರಿಯಾಗಿದೆ.

ಶ್ರೀಮತಿ ಸುಮಿತ್ರಾ ಶಾನಭಾಗ

ಆಂಧ್ರದ ಸುಪ್ರಸಿದ್ಧ ನೃತ್ಯವಾದ 'ಕೂಚಿಪುಡಿಯ' ಗಣೇಶ ನೃತ್ಯ ಇನ್ನೊಂದು ವಿಶಿಷ್ಟ ಶೈಲಿಯದು. ಮುಖಕ್ಕೆ ಗಣಪತಿಯ ಮುಖವಾಡ ಧರಿಸಿ ಕೊರಳಿಗೆ ಹಾರ ಹಾಕಿ, ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುವ ರೀತಿ ಆಕರ್ಷಕ.

ಮಹಾರಾಷ್ಟ್ರದ 'ತಮಾಷಾ' ನೃತ್ಯದಲ್ಲೂ ಮೊದಲಿಗೆ ಗಣೇಶ ಸ್ತುತಿ ಮಾಡಲಾಗುತ್ತದೆ, ಇದನ್ನು 'ಗಣ' ಎಂಬುದಾಗಿ ಕರೆಯಲಾಗುತ್ತದೆ. ಸಂತರಾಮದಾಸರು ಬರೆದ ಗಣಪದ್ಯಗಳೇ ರೂಢಿಯಲ್ಲಿವೆ.

ಮಣಿಪುರದ ಧಾರ್ಮಿಕ, ಸಾಮಾಜಿಕ ಉತ್ಸವಗಳಲ್ಲಿ ನರ್ತನವು ಬಹು ಮುಖ್ಯ ಅಂಗವಾಗಿದೆ, ನರ್ತನವು ಅಷ್ಟ ಸಾರ್ವಜನಿಕವಾಗಿದೆ. ಒಂದಲ್ಲ ಒಂದು ಸಂದರ್ಭದಲ್ಲಿ ನರ್ತನ ಮಾಡದೇ ಇರುವುದಿಲ್ಲ ಅಲ್ಲಿನ ಜನರು. ಜಲದೇವತೆ, ಅಡವಿದೇವತೆ

(36ನೇ ಪುಟ ನೋಡಿ)



# ಹಟ್ಟಿಯಂಗಡಿ ಸಿದ್ಧಿವಿನಾಯಕ

ಕರ್ನಾಟಕದಲ್ಲಿ ಅನೇಕ ಕಾರಣಿಕದ ಪ್ರಸಿದ್ಧ ಗಣಪತಿ ಕ್ಷೇತ್ರಗಳಿವೆ. ಉತ್ತರ ಕನ್ನಡದ ಗೋಕರ್ಣ; ಇಡಗುಂಜಿಗಳಂತೆ ದಕ್ಷಿಣಕನ್ನಡ ಜಿಲ್ಲೆಯ ಆನೆಗುಡ್ಡೆ; ಹಟ್ಟಿಯಂಗಡಿಯ ಸಿದ್ಧಿ ವಿನಾಯಕ ಕ್ಷೇತ್ರಗಳು ಶಕ್ತಿದಾಯಕ; ಫಲಪ್ರದ ಮಹಿಮಾತಿಶಯಗಳಿಂದ ಆಸ್ತಿಕ ಭಕ್ತರನ್ನು ಅಧಿಕ ಸಂಖ್ಯೆಯಲ್ಲಿ ಬರಮಾಡಿಕೊಳ್ಳುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕಿರುಗ್ರಾಮ "ಹಟ್ಟಿಯಂಗಡಿ" ಸಿದ್ಧಿ ವಿನಾಯಕ ಕ್ಷೇತ್ರವೆಂದೇ ಜನಪ್ರಸಿದ್ಧ.

ಹಟ್ಟಿಯಂಗಡಿ ಸಿದ್ಧಿವಿನಾಯಕ ಬಲು ಪ್ರಾಚೀನ, ವೈಶಿಷ್ಟ್ಯಪೂರ್ಣ ಕ್ಷೇತ್ರ. ಪ್ರಕೃತಿ ಸೌಂದರ್ಯದ ಮಡಿಲಲ್ಲಿರುವ ಸನ್ನಿಧಿ ಐತಿಹಾಸಿಕವಾಗಿಯೂ ಆಕರ್ಷಕ. ಕ್ರಿ. ಶ. ಮೂರನೇ ಅಥವಾ ಎಂಟನೇ ಶತಮಾನ ಪರ್ವದಲ್ಲೇ ಅಲ್ಲಿ ಸಿದ್ಧಿ ವಿನಾಯಕನ ನೆಲೆಯಾಗಿತ್ತೆಂದು ಇತಿಹಾಸಕಾರರ ಅಭಿಪ್ರಾಯ. ಶಿಥಿಲಗೊಂಡ ಪ್ರಾಚೀನ ಗರ್ಭಗುಡಿ; ದೇವಾಲಯ; ಪ್ರವೇಶದ್ವಾರಗಳನ್ನು ಅಭಿವೃದ್ಧಿಪಡಿಸಿ ನವೀಕರಿಸಲಾಗಿದೆ.

ವರಾಹಿ ನದಿಯ ಪರಿಸರದಲ್ಲಿರುವ ಗ್ರಾಮ ಹಿಂದೆ "ಗೋಷ್ಠಿಪುರ" ಹೆಸರಿನಿಂದ ಪ್ರಸಿದ್ಧವಾಗಿತ್ತು. ಅಲ್ಲಿ ಲೋಕನಾಥೇಶ್ವರ ದೇವಾಲಯ; ಮಾರಲಾದೇವಿ; ಶಂಕರನಾರಾಯಣ; ವೇಣುಗೋಪಾಲ, ಏಕಾಂತೇಶ್ವರ ದೇವಾಲಯಗಳ ಅಸ್ತಿತ್ವವಿತ್ತೆಂದು ಬಲ್ಲವರು ಹೇಳುತ್ತಾರೆ. ವರಾಹಿ ನದಿಯ ಇಕ್ಕೆಲಗಳಲ್ಲಿ ತೆಂಗಿನತೋಟ, ಹಚ್ಚನೆ ಹಸುರಿನ ಪೈರು, ಗುಡ್ಡ ಬೆಟ್ಟಗಳ ಬೆಚ್ಚನೆಯ ಆಸರೆಯ ಮಡಿಲಿನಲ್ಲಿ ಕಂಗೊಳಿಸುತ್ತಿದೆ ಸಿದ್ಧಿವಿನಾಯಕನ ಭವ್ಯ ದೇಗುಲ.

ಕುಂದಾಪುರದಿಂದ ಹಟ್ಟಿಯಂಗಡಿ ಆರು ಮೈಲು ಉತ್ತರ ದಿಕ್ಕಿನಲ್ಲಿದೆ. ಉಡುಪಿ, ಮಣಿಪಾಲ, ಕುಂದಾಪುರಗಳಿಂದ ಹಟ್ಟಿಯಂಗಡಿಗೆ ವಾಹನ ಸೌಲಭ್ಯವಿದೆ. ಕೊಲ್ಲೂರು–ವಂಡ್ಸೆ ಮಾರ್ಗವಾಗಿಯೂ; ತಲ್ಲೂರು (ರಾಷ್ಟ್ರೀಯ ಹೆದ್ದಾರಿ)-ಕೊಲ್ಲೂರು ಮಾರ್ಗವಾಗಿಯೂ ಹಟ್ಟಿಯಂಗಡಿ ತಲುಪಬಹುದು.

ಹಟ್ಟಿಯಂಗಡಿ ಸಿದ್ಧಿವಿನಾಯಕ ಎರಡೂವರೆ ಅಡಿ ಎತ್ತರದ ಸಾಲಿಗ್ರಾಮ ಶಿಲೆಯಿಂದ ರೂಪುಗೊಂಡಿದ್ದು ವಿಗ್ರಹದ ಹಿಂಭಾಗ ತಲೆಯ ಗುಂಗುರು ಕೂದಲನ್ನು ಬಿಂಬಿಸುವಂತಿದೆ. ದ್ವಿಭುಜ ವಿನಾಯಕನ ಸೊಂಡಿಲು ಎಡಮುರಿಯಾಗಿ ಮೋದಕ ಭುಂಜಿಸುವ ಭಾವದಲ್ಲಿದೆ. ಎಡಗೈಯಲ್ಲಿ ಮೋದಕ ಪಾತ್ರೆ; ಬಲಗೈಯನ್ನು ಪಾಣಿಪೀಠದಲ್ಲಿ ಇರಿಸಲಾಗಿದೆ. ಒಂದೂವರೆ ಅಡಿ ಚಚ್ಚೌಕಾಕೃತಿಯ ಪಾಣಿಪೀಠದಲ್ಲಿ ವಿನಾಯಕನ ದಿವ್ಯಮೂರ್ತಿ ಅವತರಿಸಿದೆ. ಆನೆಯಂತಹ ಭಾರಿ ಕಿವಿಗಳನ್ನು ಗುರುತಿಸಬಹುದು.

ಗರ್ಭಗೃಹದ ಸುತ್ತಲೂ ನಾಲ್ದೆಸೆಗಳಲ್ಲಿ ಪಂಚಲೋಹದ ದಶಾವತಾರ ಕೆತ್ತನೆಗಳಿವೆ. ಸಿದ್ಧಿವಿನಾಯಕನಿಗೆ ಅನುದಿನವೂ ಮಧ್ಯಾಹ್ನ ರಾತ್ರಿಪೂಜೆ; ಸಂಕಷ್ಟ ಚತುರ್ಥಿ; ಗಣೇಶ ಚತುರ್ಥಿ ಪರ್ವಗಳಂದು ವಿಶೇಷ ಪೂಜೆ; ಭಕ್ತಾದಿಗಳ ಹರಕೆ; ಸೇವೆ; ಗಣಯಾಗಗಳು ವಿಶೇಷವಾಗಿ ಜರಗುತ್ತವೆ. ಸಿದ್ಧವಿನಾಯಕ ಪವಾಡಪುರುಷನೂ ಹೌದು. ನಂಬಿದ ಭಜಕರ ಇಷ್ಟಾರ್ಥ ನೆರವೇರಿಸಿ ಪೂಜೆಕೊಳ್ಳುವ ವಿನಾಯಕ "ಮಾತನಾಡುವ ದೇವನೆಂದೇ" ಜನಪ್ರಿಯ. ಭಕ್ತಾದಿಗಳ ಸಮಸ್ಯೆ; ಕೇಳಿಕೆಗಳಿಗೆ ವಿನಾಯಕ ಪ್ರಸಾದ ರೂಪದಲ್ಲಿ ಉತ್ತರಿಸುತ್ತಾನೆ. ಭಕ್ತರು ಸನ್ನಿಧಿಯೆದುರು ತಮ್ಮ ಅಹವಾಲುಗಳನ್ನು ಮಂಡಿಸುತ್ತಾರೆ. ಪೂಜಾನಂತರ ಅರ್ಚಕರು ಭಕ್ತರ ಪರವಾಗಿ ಪ್ರಾರ್ಥಿಸಿಕೊಳ್ಳುವರು. ವಿನಾಯಕನ ಶಿರದಲ್ಲಿ ಮುಡಿಸಿದ ಪುಷ್ಪ ಉದರದ ಮೇಲೆ ಜಾರಿ ಬಲಪಾರ್ಶ್ವದ ಮೂಲಕ ಪ್ರಸಾದವಾದರೆ ಭಕ್ತನ ಬೇಡಿಕೆ ಫಲಪ್ರದವಾದಂತೆ. ಪ್ರಸಾದವಾಗದಿದ್ದರೆ ಭಕ್ತನಿಗೆ ಬೇಡಿಕೆಯಲ್ಲಿ ಅಪಜಯವೆಂದರ್ಥ. ನಂಬಿದ ಭಕ್ತರು ಸಿದ್ಧಿವಿನಾಯಕನಲ್ಲಿ ಪ್ರಾರ್ಥಿಸಿ ತಮ್ಮ ಯಾವತ್ತೂ ಕಾರ್ಯಗಳನ್ನು ಆರಂಭಿಸುವರು. ಉದ್ಯೋಗ; ಉದ್ಯಮ; ವಧೂವರ ವಿವಾಹಯೋಗ; ಶುಭಪ್ರಯಾಣಗಳಿಗಾಗಿ ವಿನಾಯಕನ ಅಪ್ಪಣೆ ಪಡೆಯುವರು.

ಮುಜರಾಯಿ ದೇವಸ್ಥಾನಕ್ಕೆ ಆಸ್ತಿಪಾಸ್ತಿಯಿಲ್ಲ. ಭಕ್ತರ ಕಾಣಿಕೆಯೇ ಆದಾಯ ಮೂಲ. ಈಚೆಗೆ ದೇವಾಲಯ ಜೀರ್ಣೋದ್ಧಾರ ಹೊಂದಿ ಆಕರ್ಷಣೆ ಹೆಚ್ಚಿಸಿಕೊಂಡಿದೆ. ಹೊರನಾಡ ಭಕ್ತಾದಿಗಳೂ ವಿನಾಯಕನ ಆರಾಧನೆಗೆ ಬರುತ್ತಾರೆ. ಭಕ್ತರ ವಸತಿಗಾಗಿ ಆರು ಲಕ್ಷ ರೂ. ಅಂದಾಜು ವೆಚ್ಚದಲ್ಲಿ ಅತಿಥಿಗೃಹ ನಿರ್ಮಾಣಗೊಂಡಿದೆ. ಮಾಧ್ಯಾಹ್ನ ಅನ್ನ ಸಂತರ್ಪಣೆಯಿದೆ. ಭಕ್ತರ ಅನುಕೂಲಕ್ಕೆ ತಕ್ಕಂತೆ ಪೂಜೆ. ಪುರಸ್ಕಾರ ಸೇವೆ, ಹರಕೆಗಳು ಸಲ್ಲಿಸಲ್ಪಡುತ್ತಿವೆ. ಕಲ್ಯಾಣ ಮಂಟಪ. ಪಾಕಶಾಲೆ, ಛತ್ರ ನಿರ್ಮಾಣಗೊಳ್ಳುತ್ತಿವೆ.

ಹಟ್ಟಿಯಂಗಡಿಯಲ್ಲಿ ತಿಳಿನೀರಬಾವಿ, ಬೃಂದಾವನಗಳಿವೆ. ಪ್ರತಿವರ್ಷ ಫಾಲ್ಗುಣ ಶುದ್ಧ ಹುಣ್ಣಿಮೆಯಂದು ಸಿದ್ಧಿವಿನಾಯಕನಿಗೆ ವಿಶೇಷ ವಾರ್ಷಿಕೋತ್ಸವ. ಎಲ್ಲೆಡೆಯಿಂದ ಅಸಂಖ್ಯಾತ ಭಕ್ತಾದಿಗಳು ಬಂದು ಭಕ್ತಿಯಿಂದ ಸೇವೆಗೈದು ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ವಾರ್ಷಿಕೋತ್ಸವ ದಿನಗಳಲ್ಲಿ ಧಾರ್ಮಿಕ ಉಪನ್ಯಾಸ, ಯಾಗಯಜ್ಞ, ಸಂಗೀತ, ಹರಿಕಥೆ, ಸನ್ಮಾನ, ಸಾಂಸ್ಕೃತಿಕ ಮನರಂಜನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ದಿನೇ ದಿನೇ ಅಭಿವೃದ್ಧಿ ಹೊಂದಿ ಕಾರಣಿಕದ ಕ್ಷೇತ್ರವಾಗಿ ಹಟ್ಟಿಯಂಗಡಿ ಜನಾಕರ್ಷಣೆಯಿಂದ ಬೆಳಗುತ್ತಿದೆ.

★

**ಶ್ರೀ ಶ್ರೀನಿವಾಸ ತಂತ್ರಿ**

# ಕರ್ನಾಟಕದಲ್ಲಿ ಗಣಪತಿ

ಎಲ್ಲೆಡೆ ಗಣೇಶನಿಗೆ ಮೊದಲ ಪೂಜೆ ಸಲ್ಲುತ್ತ ಬಂದಿದೆ. ಗಣೇಶನಿಗೆ ನಮಿಸಿ ಮಾಡುವ ಎಲ್ಲ ಕೆಲಸಕಾರ್ಯಗಳು ನಿರ್ವಿಘ್ನವಾಗಿ ನಡೆಯುತ್ತವೆ ಎಂಬ ನಂಬಿಕೆ ನಮ್ಮಲ್ಲಿ ಆಳವಾಗಿ ಬೇರೂರಿದೆ. ಕವಿಗಳು, ಭಕ್ತರು, ಪಂಡಿತರು, ಪಾಮರರು ಎಂಬ ವ್ಯತ್ಯಾಸವಿಲ್ಲದೆ, ಜಾತಿ ಮತಗಳ ಅಂತರವಿಲ್ಲದೆ ಎಲ್ಲರೂ ಮನಸಾರೆ ಪ್ರಾರ್ಥಿಸಿ, ಸ್ತುತಿಸಿ, ಕೀರ್ತಿಸಿ ಗಣೇಶನನ್ನು ವಿಶ್ವವ್ಯಾಪಿ, ವಿಶ್ವವಲ್ಲಭ, ವಿಶ್ವತೋಮುಖ, ವಿಘ್ನೇಶ್ವರ ಎಂದು ಸಾರಿದ್ದಾರೆ.

ನಮ್ಮ ದೇಶದಲ್ಲಿ ಮಾತ್ರವಲ್ಲದೆ ಪ್ರಪಂಚದ ವಿವಿಧ ದೇಶಗಳಲ್ಲಿ ಗಣೇಶನ ಪ್ರಾಚೀನ ಮೂರ್ತಿಗಳಿದ್ದು, ನಂಬಿಕೊಂಡು ಬರುತ್ತಿರುವ ಭಕ್ತರಿದ್ದಾರೆ. ಪೂಜಿಸುವ ಮನಗಳಿವೆ.

ಪ್ರಾಚೀನಕಾಲದಿಂದಲೂ ಕರ್ನಾಟಕದ ಮೂಲೆ ಮೂಲೆಗಳಲ್ಲು ಸುಂದರವಾದ ಗಣಪತಿಯ ಗುಡಿಗಳು, ಭವ್ಯವಾದ ಮೂರ್ತಿಗಳಿದ್ದು ಪುರಾಣೇತಿಹಾಸಗಳ ಹಿನ್ನೆಲೆಗಳನ್ನು ಹೊಂದಿದ್ದು, ಭಕ್ತರನ್ನು–ಸಂತರನ್ನು ಅನವರತವೂ ಆಕರ್ಷಿಸುತ್ತ ಜನಮನದಲ್ಲಿ ಭಕ್ತಿಪ್ರವಾಹವನ್ನು – ಚಿಂತನೆಯ ಬುಗ್ಗೆಯನ್ನು ಹರಿಸುತ್ತಿವೆ. ಕೆಲವು ಮುಖ್ಯ ಗಣಪತಿ ದೇಗುಲಗಳ–ಮೂರ್ತಿಯ ಬಗ್ಗೆ ವಿವಿಧಮೂಲಗಳಿಂದ ವಿವರಗಳನ್ನು ಸಂಗ್ರಹಿಸಿಕೊಡಲಾಗಿದೆ.

೧. ಆನೆಗುಡ್ಡೆ, ಕುಂದಾಪುರತಾಲ್ಲೂಕು:

ಸಪ್ತಕ್ಷೇತ್ರಗಳಲ್ಲಿ ಒಂದೆಂದು ಪ್ರಸಿದ್ಧಿ ಪಡೆದು ಪುರಾಣದಲ್ಲಿ ಕುಂಭಾಶಿ ಎಂತಲೂ ಹೆಸರುಗಳಿಸಿ ಶಿಲಾಂತರ್ಗತ ಶಕ್ತಿಸ್ವರೂಪಿಯಾಗಿ 'ಆನೆಗುಡ್ಡೆ ವಿನಾಯಕ'ನೆಂಬ ಅಭಿಧಾನದಿಂದ ಭಕ್ತಾದಿಗಳನ್ನು ಆಕರ್ಷಿಸಿ ಸಲಹುತ್ತಿದ್ದಾನೆ.

೨. ಗೋಕರ್ಣ, ಉತ್ತರಕನ್ನಡ ಜಿಲ್ಲೆ:

1. ಗರ್ವಿತರಾವಣನಿಂದ ಆತ್ಮಲಿಂಗವನ್ನು ಭೂಸ್ಪರ್ಶಿಸಿ, ಭೂಕೈಲಾಸಮಾಡಿದ ಬಾಲವಟು ಗಣಪತಿಯ ಎರಡು ಕೈಗಳ ಬತ್ತಲರೂಪವಿದೆ. ಪುರಾಣ ಪ್ರಸಿದ್ಧಿ ಪಡೆದಿದೆ.

2. ಕೋಟಿತೀರ್ಥದ ಸಮೀಪದಲ್ಲಿ ಪಟ್ಟಗಣಪತಿ ಎಂಬ ಗಣಪತಿ ಇದೆ. ಅಲ್ಲದೆ ಕೇತಕೀ ವಿನಾಯಕ ಎಂಬ ಗಣಪತಿಯ ಗುಡಿಗಳಿದ್ದು–ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತ ಬಂದಿದ್ದಾನೆ.

೩. ಇಡಗುಂಜಿ, ಉತ್ತರಕನ್ನಡ ಜಿಲ್ಲೆ:

ಪುರಾಣಪ್ರಸಿದ್ಧ ದ್ವಿಹಸ್ತಗಣೇಶ. ಒಂದು ಕೈಯಲ್ಲಿ ಮೋದಕಪಾತ್ರೆ, ಮತ್ತೊಂದು ಕೈಯಲ್ಲಿ ಪದ್ಮವಿದೆ. ಬಾಲಬ್ರಹ್ಮಚಾರಿಯ ರೂಪದಲ್ಲಿದ್ದು ಜಾಗೃತಸಿದ್ಧಸ್ಥಾನವೆಂದು ವಿಖ್ಯಾತವಾಗಿದೆ ನಾಡಿನ ಮೂಲೆ ಮೂಲೆಗಳಿಂದಲೂ ಭಕ್ತರ ಭಕ್ತಿಯ ಪ್ರವಾಹವೇ ನುಗ್ಗಿ ಬರುವಂತಿದೆ.

೪. ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ:

ಕಾಮಗತಿ ಮದಕರಿನಾಯಕನ ಮೈದುನ ಗುಲ್ಯ(ತ್ಯ)ಪ್ಪ ನಾಯ್ಕನಿಂದ ಪ್ರತಿಷ್ಠಾಪಿಸಲ್ಪಟ್ಟ ಐತಿಹಾಸಿಕ ಬೃಹತ್ ಸುಮಾರು ಎಂಟು ಅಡಿಗೂ ಎತ್ತರವಾದ ಗಣಪತಿಯ ಸುಂದರ–ಮೋಹಕ ವಿಗ್ರಹ. ಬಯಲು ಗಣಪತಿಯೆಂದೇ ಖ್ಯಾತಿ. ಇತ್ತೀಚಿಗೆ ಭಕ್ತಾದಿಗಳ ನೆರವಿನಿಂದ ಮಳೆ–ಗಾಳಿಗಳಿಂದ ರಕ್ಷಣೆಗಾಗಿ ಗಣಪತಿಗೆ ಕಟ್ಟಡ ನಿರ್ಮಾಣವಾಗುತ್ತಿದೆ.

೫. ಕೂಟಮಲೆ, ಕೋಲಾರ ಜಿಲ್ಲೆ:

14 ಅಡಿಯ ಎತ್ತರದ ಕರಿಯ ಸಾಲಿಗ್ರಾಮ ಶಿಲೆಯಲ್ಲಿ ಕೆತ್ತಿದ ಅಪೂರ್ವ ಗಣಪತಿ. ತ್ರಿಪುರಾಸುರನೆಂಬ ರಾಕ್ಷಸನನ್ನು ಸಂಹರಿಸಿದ ನಂತರ ಗಣಪತಿಯನ್ನು ವಿಜಯೋತ್ಸವದಿಂದ ದೇವತೆಗಳು ರಥದಲ್ಲಿ ಮೆರವಣಿಗೆ ಮಾಡುತ್ತಿದ್ದಾಗ ರಥದ ಗಾಲಿ ಮುರಿದು ಬಿದ್ದ ಸ್ಥಳದಲ್ಲಿಯೇ ಗಣಪತಿಯನ್ನು ಪ್ರತಿಷ್ಠಾಪನೆ ಮಾಡಲಾಯಿತೆಂಬ ನಂಬಿಕೆ ಇದೆ. ಮೈಸೂರು ಸಂಸ್ಥಾನದ ಅರಸರು ಇಲ್ಲಿ ಗಣೇಶ ಹೋಮವನ್ನು ನಡೆಸುತ್ತಿದ್ದರೆಂದು ದಾಖಲೆಯಿದೆ. ಇದನ್ನು ಕುರುಡು ಮಲೆ ಎಂತಲೂ ಕರೆಯುತ್ತಾರೆ. ಈ ಗಣಪತಿಗೆ 'ಕೌಂಡಿನ್ಯ ಮಹಾಗಣಪತಿ' ಎಂಬ ಹೆಸರು ಇದೆ.

ಶ್ರೀ ಎಂ.ಆರ್. ಮಂಜುನಾಥ

೬. ಬಾರ್ಕೂರು, ದಕ್ಷಿಣಕನ್ನಡ ಜಿಲ್ಲೆ:

1) ಚೌಳಿಕೇರಿ ಗಣಪತಿ: ವಿಜಯನಗರದ ಅರಸರ ಕಾಲದಲ್ಲಿ ಪ್ರತಿಷ್ಠಾಪಿಸಲಾಗಿದೆಯೆಂದು ತಿಳಿದ ಸುಮಾರು 15 ಅಡಿ ಎತ್ತರದ ದ್ವಿಬಾಹು ರೂಪದ ಗಣಪತಿ.

2) ಸೋಮನಾಥದೇವಾಲಯದಲ್ಲಿರುವ 20 ಸೆ.ಮೀ. ಎತ್ತರದ ಕಂಚಿನ ಬಲಮುರಿ ದ್ವಿಬಾಹು ಗಣಪತಿ. ಕಾಲ ಸುಮಾರು 11–12 ನೇ ಶತಮಾನಕ್ಕೆ ಸೇರಿದ್ದೆಂದು ವಿದ್ವಾಂಸರ ಹೇಳಿಕೆ.



3) ಮೂಡುಕೇರಿಗಣಪ, ಸುಮಾರು 3½ ಅಡಿ ಎತ್ತರದ ಹೊಯ್ಸಳ ಶಿಲ್ಪಕಲೆಯಲ್ಲಿ ನಿರ್ಮಿತವಾದ ಸುಂದರ ವಿಗ್ರಹ.

೭. ಹಟ್ಟಿ ಅಂಗಡಿ, ಕುಂದಾಪುರತಾಲ್ಲೂಕು

ಸುಮಾರು ಎಂಟನೆಯ ಶತಮಾನಕ್ಕೆ ಸೇರಿದ ದ್ವಿಬಾಹು ಗಣೇಶನ ಶಿಲಾಮೂರ್ತಿ. ನಿರಲಂಕಾರವಾಗಿದ್ದು ಉದ್ಭವಮೂರ್ತಿಯೆಂದು ಹೆಸರು ಪಡೆದು ಕಾರಣಿಕಕ್ಕೆ ಪ್ರಸಿದ್ಧಿ ಪಡೆದಿದೆ.

೮. ಹಂಪೆ, ಹೊಸಪೇಟೆ ತಾಲ್ಲೂಕು:

ವಿಜಯನಗರ ಅರಸರ ಶಿಲ್ಪಕಲೆಯ ಭವ್ಯ ಕಾಣಿಕೆ ಸುಮಾರು ಎಂಟು ಅಡಿ ಎತ್ತರದ ಸಾಸಿವೆಕಾಳು ಗಣಪತಿ ಮತ್ತು 18 ಅಡಿ ಎತ್ತರದ ಕಡಲೆಕಾಳು ಗಣಪತಿ ಬೃಹತ್ ಶಿಲ್ಪಕಲೆಯ ಭಕ್ತಿ-ಶಕ್ತಿಗಳ ಎರಕವಾಗಿವೆ.

೯. ಶಿರಸಿ, ಉತ್ತರಕನ್ನಡ ಜಿಲ್ಲೆ:

ಐದು ಅಡಿ ಎತ್ತರವಾದ ಸುಂದರ ಗಣಪತಿ. ಪಾಶ, ಅಂಕುಶ, ಮೋದಕ ಅಭಯಹಸ್ತವಿದ್ದು, ಭಕ್ತರನ್ನು ಸದಾ ಆಕರ್ಷಿಸುತ್ತಿದೆ.

೧೦. ಬನವಾಸಿ:

1) ಗಣಪತಿ ವಿಗ್ರಹ ಅರ್ಧಭಾಗವಿದೆ. ಉಳಿದರ್ಧ ಕಾಶಿಯಲ್ಲಿದೆ ಎಂಬ ನಂಬಿಕೆಯಿದೆ.

2) ಇದೇ ಮಧುಕೇಶ್ವರ ದೇವಾಲಯದಲ್ಲಿ ಢುಂಡಿರಾಜ ಗಣಪತಿಯಿದೆ. ಐದು ಇತಿಹಾಸಿಕವಾಗಿ ಖ್ಯಾತಿ ಪಡೆದಿದೆ.

೧೧. ಬೆಂಗಳೂರು:

1) ನರಹರಿರಾಯನ ಗುಡ್ಡದ ಕುಮಾರಸ್ವಾಮಿ ದೇವಾಲಯದಲ್ಲಿ ಹೇರಂಬಗಣಪತಿಯಿದೆ. ಆಕರ್ಷಕ ಚೆಲುವಿನ ಸುಂದರ ಭವ್ಯಮೂರ್ತಿಯಾಗಿದೆ.

2) ಬಸವನಗುಡಿಯಲ್ಲಿರುವ ಸುಮಾರು ಎಂಟಡಿಯ ಗಣಪತಿ ಅಡ್ಡಡ್ಡವಾಗಿ ವರ್ಷ ವರ್ಷವೂ ಬೆಳೆಯುತ್ತ ಜಾಗೃತಸ್ಥಾನವೆಂದು ಖ್ಯಾತಿಪಡೆದು ಜನಮನ ಸೂರೆಗೊಳ್ಳುತ್ತಿದೆ.

೧೨) ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ:

1) ರತ್ನಗರ್ಭಗಣಪತಿ ಶ್ರೀ ಆದಿಶಂಕರರಿಂದ ಪೂಜೆಗೊಂಡ ಗಣಪತಿಯೆಂದು ಖ್ಯಾತಿ ಪಡೆದಿದೆ.

2) ಮಲಹಾನಿಕರೇಶ್ವರ ದೇವಾಲಯದ ಮೇಲಿನ ಗಣೇಶಸ್ತಂಭದಲ್ಲಿನ ಗಣೇಶ ಮೂರ್ತಿ ಅಭಿನವ ನೃಸಿಂಹಭಾರತೀಯವರ ಅರಶಿನಕೊಂಬಿನಿಂದ ಬರೆದಿದ್ದು-ಕ್ರಮವಾಗಿ ವಿಗ್ರಹವಾಯಿತೆಂಬ ಭಾವನೆಯಿದೆ.

೧೩. ಬೇಲೂರು:

ಹೊಯ್ಸಳ ಶಿಲ್ಪಕಲೆಯಲ್ಲಿನ ಗಣೇಶ. ವಿಶ್ವಕಂಬದಲ್ಲಿ ಕಡಲೆಕಾಳಿನ ಗಣಪತಿ, ಚೆನ್ನಕೇಶವದೇವಾಲಯದಲ್ಲಿನ ಹಿಂಬಾಗದಲ್ಲಿನ ವಿದ್ಯಾಗಣಪತಿ, ಹೆಬ್ಬಾಗಿಲು ಬಳಿಯ ಗಣಪತಿ ಅತ್ಯಂತ ಮೋಹಕವಾಗಿವೆ.

೧೪. ಹಳೇಬೀಡು:

ಹಳೇಬೀಡಿನ ನೃತ್ಯಗಣಪತಿ ಅತ್ಯಂತ ಸುಂದರ ಮನೋಹರಮೂರ್ತಿ. ಆಭರಣಗಳಿಂದ ಅಲಂಕೃತವಾಗಿ ಜನಪ್ರಿಯವಾಗಿದೆ.

೧೫. ಹೆಬ್ರಿ, ದಕ್ಷಿಣಕನ್ನಡ ಜಿಲ್ಲೆ:

ಅರ್ಧನಾರೀಶ್ವರ ದೇವಾಲಯದಲ್ಲಿರುವ ಗಣೇಶನ ಮೂರ್ತಿ ಬೂದುಬಣ್ಣದ ಲಿಂಗದಲ್ಲಿ ಎಡಭಾಗಕ್ಕೆ ಸೊಂಡಿಲು ಮಾತ್ರ ಹೊಂದಿದ್ದು ಇದರ ಎತ್ತರ 15 ಅಡಿ ಇರುತ್ತದೆ.

೧೬. ಕೋಟಿ, ಉಡುಪಿತಾಲ್ಲೂಕು:

ಎರಡು ಅಡಿ ಎತ್ತರದ ಬೆಲ್ಲದ ಬಾಲ ಗಣಪತಿ ಎಂದು ಖ್ಯಾತಿ ಇದರಲ್ಲಿ ಮೂಷಿಕ ವಾಹನವಿಲ್ಲ. ದ್ವಿಭುಜನಾಗಿದ್ದಾನೆ. ಕಾಲ 12 ನೇ ಶತಮಾನ ವಿರಬಹುದೆಂದು ವಿದ್ವಾಂಸರ ಅಭಿಪ್ರಾಯ.

೧೭. ಭದ್ರಾವತಿ, ಶಿವಮೊಗ್ಗ ಜಿಲ್ಲೆ:

ನರಸಿಂಹದೇವಸ್ಥಾನದ ಪ್ರಾಕಾರದಲ್ಲಿ ಐತಿಹಾಸಿಕ ಬೆಣ್ಣೆಗಣಪತಿ. ಭಕ್ತರಿಂದ ಬೆಣ್ಣೆ ಸೇವೆಯನ್ನು ಸ್ವೀಕರಿಸಿ ಕರುಣಿಸುವ ಕರುಣಾಮಯಿ. ಈ ದೇವಾಲಯದ ಹೊರಗಡೆ ವಿದ್ಯಾಗಣಪತಿ ಮೂರ್ತಿ ಇದೆ.

೧೮. ಕಾರ್ಗಡಿ, ಹೊಸನಗರತಾಲ್ಲೂಕು:

ಉದ್ಭವ ಗಣೇಶನ ಸುಂದರ ಮೂರ್ತಿ. ಮಲೆನಾಡಿನ ಮೋಹಕ ಚೆಲುವಿನ ನಡುವೆ ಭಕ್ತಿಯೇ ನೆಲೆಸಿದಂತೆ ಗಣೇಶನಿದ್ದಾನೆ.

೧೯. ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ:

ತುಂಗಾನದಿಯ ತೀರ. ದೇವಾಲಯದ ಹತ್ತಿರದ ಬಂಡೆಯ ಮೇಲೆ ಮತ್ತು ಸ್ತಂಭದ ಮೇಲೆ ಗಣೇಶನ ಶಿಲ್ಪವಿದೆ. ಎಲ್ಲ ಮಂಗಳ ಕಾರ್ಯಗಳ ಈಡೇರಿಕೆಗಾಗಿ ಭಕ್ತಸ್ತೋಮ ಕಾದುನಿಂತಿದೆ.

(29 ನೇ ಪುಟ ನೋಡಿ)

# ಶ್ರೀ ಗಣೇಶದರ್ಶನ

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಭಾರತೀಯ ದೇವತಾಪರಂಪರೆಯಲ್ಲಿ ಪ್ರಥಮ ಪೂಜಾರ್ಹನಾದವನು "ಗಣಪತಿ". "ಆದೌ ಪೂಜ್ಯೋ ಗಣಾಧಿಪ". ಈತನು ವಿಘ್ನಹರ್ತನಾದಂತೆ ವಿಘ್ನಕರ್ತನೂ ಆಗಿದ್ದಾನೆ. ಆದುದರಿಂದಲೇ ಇವನು ವಿಘ್ನೇಶ್ವರ. ಬ್ರಹ್ಮಾದಿ ಸಕಲ ದೇವತೆಗಳೂ ತಮ್ಮ ಕರ್ತವ್ಯವನ್ನು ನಿರ್ವಹಿಸುವ ಮೊದಲು ಈ ವಿಘ್ನೇಶ್ವರನ ಅನುಗ್ರಹವನ್ನು ಬೇಡಿದ್ದಾರೆ. ತ್ರಿಪುರ ಸಂಹಾರಿಯಾದ ಶಿವ, ಬಲಿಬಂಧನ ಕರ್ತೃವಾದ ವಿಷ್ಣು, ಸೃಷ್ಟಿಕರ್ತನಾದ ಪಿತಾಮಹ, ಮಹಿಷ ಮರ್ದಿನಿಯಾದ ದೇವಿ–ಇತ್ಯಾದಿಗಳು ಗಣಪತಿಯ ಕೃಪಾ ವಿಶೇಷದಿಂದಲೇ ತಮ್ಮ ತಮ್ಮ ಕಾರ್ಯಗಳಲ್ಲಿ ಯಶಸ್ವಿಯಾಗಿದ್ದಾರೆ.

"ಕಲೌ ಚಂಡೀವಿನಾಯಕೌ" ಎಂಬ ಉಕ್ತಿಯಂತೆ ನಮ್ಮ ಈ ಯುಗದಲ್ಲಿ ವಿನಾಯಕನು ಪ್ರಮುಖ ಆರಾಧ್ಯದೇವದ್ವಯದಲ್ಲಿ ಒಬ್ಬ. ಗಜಾನನ" ಎಂಬುದು ಗಣಪತಿಯ ಇನ್ನೊಂದು ಹೆಸರು. ಆನೆಯ ಮುಖವನ್ನು ಪಡೆದುದರಿಂದ ಗಜಾನನ ಎಂಬ ಅಂಕಿತವು ಅನ್ವರ್ಥ. ಋಗ್–ಯಜುರ್ ಸಾಮನ್, ಅಥರ್ವನ್, ಎಂಬ ನಾಲ್ಕು ವೇದ ಬೋಧಕವಾದ ಪದಗಳಲ್ಲಿರುವ, "ಗಜಾನನ" ಎಂಬ ಅಕ್ಷರಗಳಿಂದ ಅಳವಡಿಸಿದ ಶಬ್ದ ಗಜಾನನ ಎಂದು ವಿಶ್ಲೇಶಿಸಿ ಈತನನ್ನು ಚತುರ್ವೇದ ಪ್ರತಿಪಾದ್ಯ ಎಂದಿದ್ದಾರೆ.

ಋಗ್ವೇದ ಶುಕ್ಲಯಜುರ್ವೇದಗಳ-ಗಣಾನಾಂತ್ವಾ ಎಂಬ ಮಂತ್ರ, ತೈತ್ತಿರೀಯ ಆರಣ್ಯಕದ "ತತ್ಪುರುಷಾಯ ವಿದ್ಮಹೇ ವಕ್ರತುಂಡಾಯಧೀಮಹಿ" ಎಂಬ ಗಣೇಶ ಗಾಯತ್ರೀ, ನಮಸ್ತೇ ಗಣಪತಯೇ ತ್ವಮೇವ ಪ್ರತ್ಯಕ್ಷಂ ತತ್ತ್ವಮಸಿ–ಎಂಬ ಗಣೇಶಾಥರ್ವಶಿರಸ್ಸಿನ ಪ್ರಥಮವಾಕ್ಯ ಈ ತನನ್ನೇ ಕುರಿತವು ಗಳಾಗಿವೆ. ಪ್ರಾಯಃ ಗಣಪತಿಯ ಕಥೆಯಿಲ್ಲದ ಯಾವ ಪುರಾಣವೂ ಇರಲಾರದು. ಗಣೇಶನನ್ನೇ ಆಧರಿಸಿದ ಪುರಾಣ "ಗಣೇಶಪುರಾಣ". ಇದರಂತೆ "ಗಣೇಶಗೀತಾ" ಎಂಬುದು ಭಗವದ್ಗೀತೆಯಂತಹ ಆಧ್ಯಾತ್ಮತತತ್ತ್ವ ಪ್ರತಿಪಾದಕ ಗ್ರಂಥ. ಗಣೇಶೋಪಾಸನೆ ಪ್ರಧಾನವಾಗಿ ವಿಘ್ನನಿವಾರಣೆಯ ಉದ್ದೇಶ್ಯವಾದರೂ "ಸರ್ವಂ ಚೈವ ಗಣಾಧಿಪಾತ್

—ಸ್ಮೃತ್ಯುಕ್ತಿ. ಈ ಉಪಾಸನೆ ಸರ್ವಸಾಧಕ ಎಂದು ಘೋಷಿಸಿದೆ.

ಗಣೇಶನ ಉತ್ಪತ್ತಿಯ ಬಗೆಗೆ ಪುರಾಣಗಳ ಬಿನ್ನತೆಯಿಂದ ಕಥೆಗಳೂ ಭಿನ್ನ ಭಿನ್ನವಾಗಿವೆ. "ಗಿರಿಜೆಯ ಅಂಗಲೇಪದಿಂದ ಸೃಷ್ಟಿಸಿದ ಮೂರ್ತಿ ಈತ, ಈತನಿಗೆ ಗಂಗಾಜಲದಿಂದ ಅಭಿಷೇಕ ಮಾಡಿದಾಗ ಪ್ರಾಣಸಂಚಾರವಾಯಿತು" ಎಂಬುದು ಮತ್ಸ್ಯಪುರಾಣದ ಕಥೆ ಲಿಂಗಪುರಾಣದಲ್ಲಿನ ಕಥೆ ಹೀಗಿದೆ–"ಪುಣ್ಯಕರ್ಮಗಳಿಗೆ ಒದಗಿ ಬರಬಹುದಾದ ಅಡ್ಡಿ ಆತಂಕಗಳನ್ನು ಪಡೆಯುವ ಪಾಪಕರ್ಮಗಳಿಗೆ ವಿಘ್ನವನ್ನುಂಟುಮಾಡಲು ಒಬ್ಬ ದೇವತೆಯ ಅವಶ್ಯಕತೆಯನ್ನು ಮನಗಂಡ ಇಂದ್ರಾದಿ ದೇವತೆಗಳ ಪ್ರಾರ್ಥನೆಯಂತೆ ಶಿವನು ಈತನನ್ನು ಸೃಷ್ಟಿಸಿದ. ಬ್ರಹ್ಮವೈವರ್ತದಲ್ಲಿ "ಪಾರ್ವತಿಯ ತಪಸ್ಸಿಗೆ ಮೆಚ್ಚಿದ ವಿಷ್ಣುವು ವರಪ್ರದಾನವಾಗಿ ಕೊಡಲ್ಪಟ್ಟ ಸಂತಾನ" ಎಂದು ಹೇಳಲಾಗಿದೆ. "ಪಾರ್ವತಿಯು ತನ್ನ ದೇಹ ಮಾಲಿನ್ಯದಿಂದ ಸೃಷ್ಟಿಸಿ ದ್ವಾರಪಾಲಕನನ್ನಾಗಿ ಮಾಡಿಕೊಂಡಾಗ ಶಿವನಿಂದ ಶಿರಚ್ಛೇದವಾಗಿ ಆನೆಯ ತಲೆಯನ್ನು ಜೋಡಿಸಲಾಯಿತು" ಎಂಬ ಸುಪ್ರಸಿದ್ಧವಾದ ಆಖ್ಯಾನ ಶಿವಪುರಾಣದ್ದು. "ಕಾಮೇಶ್ವರ ಮುಖಾಲೋಕ ಕಲ್ಪಿತ ಶ್ರೀ ಗಣೇಶ್ವರಾ" ಎಂಬ ಬ್ರಹ್ಮಾಂಡ ಪುರಾಣದ ಲಲಿತಾಸಹಸ್ರನಾಮಾಂತರ್ಗತವಾದ ಉಕ್ತಿ ದೈತ್ಯರಾಜನಿಂದ ರಚಿತವಾದ ವಿಘ್ನಯಂತ್ರ ಸಂಭೇದನಕ್ಕಾಗಿ ದೇವಿಯು ಕಾಮೇಶ್ವರನ ಮುಖವನ್ನು ನೋಡುವುದರ ಮೂಲಕ ಈತನನ್ನು ಸೃಷ್ಟಿಸಿದಳು ಎಂಬುದಾಗಿ ತಿಳಿಸುತ್ತಿದೆ.

ಗಣಪತಿಯ ಉಪಾಸನೆಯು ಕೇವಲ ಹಿಂದೂಗಳಿಗೆ ಮಾತ್ರ ಮೀಸಲಾದುದಲ್ಲ. ಜೈನರೂ, ಬೌದ್ಧರೂ ಈ ವಿಘ್ನದೇವತೆಯನ್ನು ಆರಾಧಿಸುವ ಪದ್ಧತಿಯಿದೆ. ಜೈನರಲ್ಲಿ ವಿವಾಹಕ್ಕೆ ಮೊದಲು ಪಠಿಸುವ ಮಂತ್ರ ವಿನಾಯಕಮಂತ್ರ, ಅಂತೆಯೇ ಬೌದ್ಧರಸಾಧನ ಮಾಲಾ ಗ್ರಂಥದ ಓಂ ನಮಃ ಗಣಪತಯೇ" ಎಂಬ ಮಂತ್ರಗಳು ಮೇಲಿನ ಮಾತಿನ ಪ್ರಮಾಣಗಳಾಗಿವೆ. ಬೌದ್ಧರಲ್ಲಿ ಗಣಪತಿಯ ಸ್ತ್ರೀರೂಪವನ್ನು ಆರಾಧಿಸುವ ಪದ್ಧತಿಯೂ ಇದೆ.

"ಏಗಟ್ಟಿ" ಎಂಬ ವಿದೇಶೀಮಹಿಳೆಯಿಂದ ಬರೆಯಲ್ಪಟ್ಟು, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಿಂದ ಪ್ರಕಟವಾದ ಗ್ರಂಥವೊಂದರಲ್ಲಿ ಗಣೇಶೋಪಾಸನೆಯ ವಿಸ್ತೃತವಾದ ವಿವರಣೆಯಿದೆ. ಚೀನಾ, ಬರ್ಮಾ, ಮಂಗೋಲಿಯಾ ಮೊದಲಾದ ನೆರೆರಾಷ್ಟ್ರಗಳಲ್ಲಿಯೂ ಗಣಪತಿಯನ್ನು ಬೇರೆಬೇರೆಯ ಅಂಕಿತಗಳಿಂದ ಆರಾಧಿಸುವ ಪದ್ಧತಿಯಿದೆ. ಇಂಗ್ಲೀಷ್ ಭಾಷೆಯ 'ಬಿಗಿನಿಂಗ್' ಎಂಬ ಪದವು ವಿಘ್ನಹರ್ತ ಎಂಬ ಪದದ ಅಪಭ್ರಂಶವೆಂದೂ, ಉರ್ದೂ ಭಾಷೆಯ ಆಗಾಜ್, ಇಬ್ತಿದಾ ಪದಗಳು "ಗಜಾಸ್ಯ", ಈಪ್ಸಿತದಾತ" ಎಂಬವುಗಳ ಅಪಭ್ರಂಶಗಳೆಂದೂ ವಾದಿಸುವವರೂ ಇದ್ದಾರೆ.

ಭಾರತೀಯ ಸಾಧುಸಂತರು, ಗ್ರಂಥಕರ್ತರ ತಮ್ಮ ರಚನೆಯ ಆರಂಭದಲ್ಲಿ ಈತನನ್ನು ಸ್ತುತಿಸಿದ್ದಾರೆ. ಗಣೇಶನ ವಿಶೇಷ ಕೃಪೆಗೆ ಪಾತ್ರಳಾದ ದ್ರಾವಿಡ ಕವಯಿತ್ರಿ "ಅವ್ವೆಯಾರ್" ರಚಿಸಿದ "ವಿನಾಯಕರ ಅಹವಲ್" ಎಂಬ ಗ್ರಂಥ ಗಣೇಶನಿಗಾಗಿಯೇ ಮೀಸಲಾಗಿದೆ. ಶ್ರೀತತ್ತ್ವನಿಧಿ ಎಂಬಗ್ರಂಥವು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಎಂಬುವರಿಂದ ರಚಿಸಲ್ಪಟ್ಟ ಗ್ರಂಥ. ಇದರಲ್ಲಿ ಗಣಪತಿಯ ಮೂವತ್ತೆರಡು ಪ್ರಭೇದಗಳನ್ನೂ ಅವುಗಳ ಲಕ್ಷಣವನ್ನೂ ವಿವರಿಸಲಾಗಿದೆ.

ಶಿವ, ವಿಷ್ಣು, ರವಿ, ಗಣೇಶ, ದೇವಿ ಎಂಬುವು ಪಂಚಾಯತನ ದೇವತೆಗಳು ಪಂಚಭೂತಗಳ ಪ್ರತೀಕವಾಗಿವೆ. "ಜೀವನಸ್ಯಗಣಾಧಿಪ" ಎಂಬಂತೆ ಗಣೇಶನು ಜಲತತ್ತ್ವಕ್ಕೆ ಸಂಬಂಧಿಸಿದವನು. ಯುಗ ಚತುಷ್ಟಯಭೇದದಿಂದ ಗಣಪತಿಯ ವಾಹನಾದಿಗಳು ಭಿನ್ನವಾಗುತ್ತವೆ. ಇತರ ದೇವತೆಗಳಂತೆ ಗಣೇಶನ ಬೇರೆ ಬೇರೆಯ ಅವತಾರಗಳಾಗಿವೆ. ವಕ್ರತುಂಡ, ಏಕದಂತ, ಮಹೋದರ, ಗಜಾನನ, ಲಂಬೋದರ, ವಿಕಟ, ವಿಘ್ನರಾಜ, ಧೂಮ್ರವರ್ಣ, ಎಂಬ ಈ ಅವತಾರಗಳು ಮತ್ಸರ, ಮದ, ಮೋಹ ಲೋಭ, ಕ್ರೋಧ, ಕಾಮ, ಇತ್ಯಾದಿ ರಾಕ್ಷಸರ ಸಂಹಾರಕ್ಕಾಗಿ ಸಂಭವಿಸಿದವು ಎಂದು "ಗಣೇಶಪುರಾಣ"ದಲ್ಲಿ ಹೇಳಲಾಗಿದೆ. ಮಾಸ ಭೇದಾತ್, ಅಂತೆಯೇ ಅಭಿಚಾರಿಕಾದಿ ಪ್ರಯೋಗ ಭೇದಾತ್, ಗಜಾನನ ಆಕಾರಾದಿಗಳು ವ್ಯತ್ಯಸ್ತವಾಗಿ ಉಪಾಸಿಸಲ್ಪಡುತ್ತವೆ.

"ಸಿದ್ಧಿ ಬುದ್ಧಿ" ಎಂಬ ಬ್ರಹ್ಮಮಾನಸ ಪುತ್ರಿಯರಲ್ಲಿ "ಕ್ಷೇಮ–ಲಾಭ" ಎಂಬ ಪುತ್ರರನ್ನು ಪಡೆದ ಗಣಪತಿ ಸಕುಟುಂಬಿ.

'ಏಕದಂತಾದಿ' ಗಣೇಶನ ಪರ್ಯಾಯಗಳಿಗೆ ಸಂಬಂಧಿಸಿದ ಕಥೆಗಳೂ ಇವೆ. ಶಿವನ ದರ್ಶನಕ್ಕಾಗಿ ಕೈಲಾಸಕ್ಕೆ ಬಂದ ಪರಶುರಾಮನನ್ನು ದ್ವಾರದಲ್ಲಿ ಗಣಪತಿಯು ತಡೆದ ಕಾರಣದಿಂದ ದಂತ ಮುರಿಯಲ್ಪಟ್ಟು 'ಏಕದಂತ'ನಾದ. ಮಹಾಭಾರತವನ್ನು ವೇದವ್ಯಾಸರ ಪ್ರಾರ್ಥನೆಯಂತೆ ಬರೆಯಲು ಹೊರಟು ತನ್ನದಂತವನ್ನೇ ಕಿತ್ತು

(29ನೇ ಪುಟ ನೋಡಿ)

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

**ಕನ್ನಡ :**

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ಕ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು –ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

<u>ಮಕ್ಕಳಿಗಾಗಿ :</u>

| | | |
|---|---|---|
| ಶ್ರೀಪಾದರಾಜರು | –ಎಂ. ಎಸ್. ಗುಂಡೂರಾವ್ | 0–75 |
| ಮಹಿಪತಿದಾಸರು | –ಶಾನಭಾಗ | 0–85 |
| ಪ್ರಸನ್ನ ವೆಂಕಟದಾಸರು | –ವಿ. ಬಾದರಾಯಣಮೂರ್ತಿ | 0–80 |
| ಗೋಪಾಲದಾಸರು | –ರುಕ್ಮಿಣಿಗಿರಿಮಾಜಿ | 0–75 |

**ಹಿಂದಿ :**

ಶ್ರೀವೇಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

**ಸಂಸ್ಕೃತ :**

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

**ಕೂಡಲೇ ಬರೆಯಿರಿ :**

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,**

**ತಿ. ತಿ. ದೇ. ತಿರುಪತಿ.**




**ಪ್ರಾರ್ಥನೆ :**

ನಾಟರಾಗ

ಕೃಷ್ಣೋ ರಕ್ಷತು ನೋ ಜಗತ್ರಯ ಗುರುಃ
ಕೃಷ್ಣಂ ನಮಸ್ಯಾಮ್ಯಹಂ।
ಕೃಷ್ಣೇನಾಮರಶತ್ರವೋ ವಿನಿಹತಾಃ
ಕೃಷ್ಣಾಯ ತಸ್ಮೈ ನಮಃ॥
ಕೃಷ್ಣಾದೇವ ಸಮುತ್ಥಿತಂ ಜಗದಿದಂ
ಕೃಷ್ಣಸ್ಯದಾಸೋಸ್ಮ್ಯಹಂ।
ಕೃಷ್ಣೇ ತಿಷ್ಠತಿ ಸರ್ವ ಮೇತದ ಖಿಲಂ
ಹೇ ಕೃಷ್ಣ ರಕ್ಷಸ್ವ ಮಾಂ॥
(ಮುಕುಂದಮಾಲಾ– ಕುಲಶೇಖರಾಳ್ವಾರ್)

**ಅವತಾರ :**

ಶ್ರೀ ಕೃಷ್ಣನನ್ನು ಭಾರತೀಯರು ಅತ್ಯಂತ ಭಕ್ತಿಯಿಂದ ಉಪಾಸನೆ ಮಾಡಿಕೊಂಡು ಬಂದಿದ್ದಾರೆ. ನೂರಾರು ತಲೆಮಾರಿನ ಜನ ಜೀವನದಲ್ಲಿ, ಶ್ರೀಕೃಷ್ಣನ ಹೆಸರು ಉದ್ಧಾರಕಶಕ್ತಿಯಾಗಿ ತಾರಕನಾಮವಾಗಿದೆ. 'ಕರ್ಷಯತಿ ಯೋಗಿನಾಂ ಮನಾಂಸಿ ಇತಿ ಕೃಷ್ಣಃ'– ಅಂದರೆ ಭಕ್ತರ ಹೃದಯವನ್ನು ಸೆಳೆಯುವವನು. ಕೃಷ– ಎಂಬುದು 'ಸತ್' ವಾಚಕ. 'ಣ' ಎಂಬುದು ಆನಂದವಾಚಕ. ಇವೆರಡೂ ಸೇರಿ ಪರಬ್ರಹ್ಮವೆಂದು ಅರ್ಥವಾಗುತ್ತದೆ. ಶ್ರೀ ಕೃಷ್ಣಾವತಾರದಲ್ಲಿ ಭಗವಂತನು ಲೋಕದ ಮಾನವರು ಹೇಗೆ ಜನನ, ಬಾಲ್ಯ, ಯೌವನ, ವಾರ್ಧಕ್ಯ ಇತ್ಯಾದಿಗಳನ್ನು ಅನುಭವಿಸುವರೋ ಹಾಗೆಯೇ ಆ ಎಲ್ಲಾ ಅವಸ್ಥೆಗಳಲ್ಲೂ ಲೋಕಕ್ಕೆ ಆದರ್ಶನೀಯವಾದ ಕಾರ್ಯಗಳನ್ನು ಮಾಡಿದಂತೆ ವಿಡಂಬನ ನಡೆಸಿ ಅನುಗ್ರಹಿಸಿದ್ದಾನೆ. ಪೂರ್ಣಾವತಾರಿ ಶ್ರೀ ಕೃಷ್ಣನ ಈ ಎಲ್ಲ ಲೀಲೆಗಳನ್ನೂ ಕರ್ನಾಟಕದ ಹರಿದಾಸರು ಮತ್ತು ಇತರ ಭಕ್ತ ಶ್ರೇಷ್ಠರು ತಮ್ಮ ಅಮೋಘ ಕವಿತಾ ವಾಣಿಯಿಂದ ಹಾಡಿ ವರ್ಣಿಸಿದ್ದಾರೆ.

ಶ್ರೀಕೃಷ್ಣನು ಕಾರಾಗೃಹದಲ್ಲಿ ಅವತರಿಸಿದೊಡನೆ ತಂದೆ ವಸುದೇವನು ಆ ಅಪ್ರಾಕೃತ ಶಿಶುವನ್ನು ಕಂಡ. ಆನಂದದಿಂದ, ನಿಬ್ಬೆರಗಿನಿಂದ, ಆ ಪರಮ ಪುರುಷ ಶಿಶುವನ್ನು ಸ್ತುತಿಸಿದ. ಅವನು ಕಂಡ ಅದ್ಭುತ ಬಾಲಕನಿಗೆ ತಾವರೆಯಂದದ ಕಣ್ಣು, ನಾಲ್ಕು ತೋಳು, ಶಂಖ ಚಕ್ರ ಗದೆಗಳನ್ನು ಎತ್ತಿ ಹಿಡಿದಿದ್ದಾನೆ. ಎದೆಯಲ್ಲಿ ಶ್ರೀವತ್ಸ ಚಿಹ್ನೆ, ಕೊರಳಲ್ಲಿ ಕೌಸ್ತುಭಮಣಿ, ಒತ್ತು ಮೇಘದ ಸೊಬಗಿನ ನೀಲವರ್ಣ. ಇದು ಆದಿ ಅಂತ್ಯ ರಹಿತನಾಗಿರುವುದನ್ನು ಸೂಚಿಸುತ್ತದೆ. ಪೀತಾಂಬರ ಧರಿಸಿದ್ದಾನೆ. ಇದರ ಹಳದಿ ಬಣ್ಣವು ಪಾಪಿಗಳನ್ನು ಸೂಚಿಸುತ್ತದೆ. ನೀಲಿ ಮತ್ತು ಹಳದಿ ಬಣ್ಣವು ಸೇರಿ ಹಸಿರು ಬಣ್ಣವಾಗುವುದು. ಪಾಪಿಗಳ ಉದ್ಧಾರವನ್ನು ಸೂಚಿಸುತ್ತದೆ. ಅನರ್ಘ್ಯ ವೈಡೂರ್ಯದ ಕೆತ್ತನೆಯ ಕಿರೀಟ ಕುಂಡಲಗಳನ್ನು ಧರಿಸಿದ್ದಾನೆ. ಅವುಗಳ ಕಾಂತಿಯಲ್ಲಿ ಮಿನುಗುತ್ತಿದೆ ಅವನ ಕೂದಲೋಳಿ ಇನ್ನೂ ಹಿರಿಮೆರುಗಿನ ನಡುಗಟ್ಟು, ತೋಳ್ಬಂದಿ, ಕೈಬಳೆ ಮೊದಲಾದ ಒಡವೆಗಳ ನಲ್ಲೊಡವು. ಇಂತು ಮೆರವ ಕುಮಾರನನ್ನು ಕಂಡು ವಸುದೇವನು ಕೃತಾರ್ಥನಾದ.

ಈ ವಿವರಣೆಯುಳ್ಳ ಶ್ರೀಮದ್ಭಾಗವತದ ಶ್ಲೋಕವನ್ನು ಕೇಳಿ:–

ಕೇದಾರಗೌಳ

ತಮದ್ಭುತಂ ಬಾಲಕಂ ಅಂಬುಜೇಕ್ಷಣಂ
ಚತುರ್ಭುಜಂ ಶಂಖ ಗದಾದ್ಯು
ದಾಯುಧಂ।
ಶ್ರೀವತ್ಸ ಲಕ್ಷ್ಮಂ ಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರ ಪಯೋದ
ಸೌಭಗಂ॥

ಆನಂದಭೈರವಿ

ಮಹಾರ್ಹ ವೈಡೂರ್ಯ ಕಿರೀಟಕುಂಡಲ
ತ್ವಿಷಾ ಪರಿಷ್ವಕ್ತ ಸಹಸ್ರಕುಂತಲಂ।
ಉದ್ದಾಮ ಕಾಂಚ್ಯಂಗದ ಕಂಕಣಾದಿಭಿಃ
ವಿರೋಚಮಾನಂ ವಸುದೇವ ಐಕ್ಷತ॥

**ಎಂ. ವಿ. ಸಂಪತ್ಕುಮಾರಾಚಾರ್ಯ**

**ಬಾಲಲೀಲೆ :**

ಆಂಡಾಳ್ ದೇವಿಯು ಹೇಳಿರುವಂತೆ ಒಂದೇ ರಾತ್ರಿಯಲ್ಲಿ ಒಂದು ತಾಯಿಯ ಮಗನಾಗಿ ಹುಟ್ಟಿ, ಅವಳನ್ನು ಬಿಟ್ಟು ಸಾಕುತಾಯಿಯ ಮಗನಾಗುವನು. (ಒರುತ್ತಿ ಮಗನಾಯ್ ಪಿರಂದ್ ಓರಿರವಿಲ್ ಒರುತ್ತಿ ಮಗನಾಯ್ ಒಳಿತ್ತು ವಳರ). ನಂದಗೋಕುಲದಲ್ಲಿ ಬೆಳೆದ ಅವನ ಬಾಲಲೀಲೆಗಳು, ಚೇಷ್ಟೆಗಳು, 'ಪರಾವರ ನಿಖಿಲ ಜನ ಮನೋನಯನಹಾರಿ ದಿವ್ಯ ಚೇಷ್ಟಿತಾನಿ' ಎಂದು ಭಗವದ್ರಾಮಾನುಜಾಚಾರ್ಯರು ಹೇಳಿರುವಂತೆ, ಮಹರ್ಷಿಗಳಾದಿಯಾಗಿ ಭೀಷ್ಮರಂತಹ ಜ್ಞಾನಿಗಳು, ಜನಸಾಮಾನ್ಯರು, ಸ್ತ್ರೀ ಪುರುಷ ಬಾಲಕರು– ಎಲ್ಲರ ಮನಸ್ಸನ್ನೂ ಆಕರ್ಷಿಸಿದುವು– ಆಕರ್ಷಿಸುತ್ತಿವೆ.

ನಂದಗೋಪನ ಪತ್ನಿ ಯಶೋದೆ ತನ್ನ ಮಗನೆಂದೇ ತಿಳಿದಿರುವ ಶಿಶು ಶ್ರೀಕೃಷ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು ಆಡಿಸುತ್ತಿರುವ ಸಂದರ್ಭವನ್ನು ದಾಸಶ್ರೇಷ್ಠ ಪುರಂದರದಾಸರ ವಾಣಿಯಲ್ಲಿ ಕೇಳಿ :

ಕಲ್ಯಾಣಿ – ಆದಿ

ಲಾಲಿಸಿದಳು ಮಗನಾ, ಯಶೋದೆ।
ಲಾಲಿಸಿದಳು ಮಗನ ॥ ಪ ॥

ಅರಳೆಲೆ ಮಾಗಾಯಿ
ಬೆರಳಿಗುಂಗುರವಿಟ್ಟು।
ತರಳನ ಮೈಸಿರಿ ತರುಣಿ
ನೋಡುತ ಹಿಗ್ಗಿ ॥ ೧ ॥

ಬಾಲಕನೆ ಕೆನೆಹಾಲು ಮೊಸರ ನೀವೆ।
ಲೀಲೆಯಿಂದಲಿ ಎನ್ನ ತೋಳ
ಮೇಲೆ ಮಲಗೆಂದು ॥ ೨ ॥

ಮುಗುಳು ನಗೆಯಿಂದ
ಮುದ್ದು ತಾ ತಾರೆಂದು।
ಜಗದೊಡೆಯನ ಶ್ರೀ ಪುರಂದರ ವಿಠಲನ॥

ಈ ಅತಿ ಮುದ್ದಾಟದ ಹಿಂಸೆಯಿಂದ ಮಗು ಕೃಷ್ಣ ಅಳಲು ತೊಡಗಿದ. ಆಗ ಯಶೋದೆಯು ಸಮಾಧಾನ ಪಡಿಸಲು ಶ್ರೀ ರಾಮನ ಕಥೆ ಹೇಳಲು ತೊಡಗಿದಳು. "ರಾಮ ಎಂಬಾತ ಇದ್ದ". 'ಹುಂ' ಎಂದಿತು ಮಗು. "ಸೀತೆ ಎಂಬಾಕೆ ಅವನ ಹೆಂಡತಿ" ಹುಂ, "ತಂದೆಯ ಮಾತಿನಂತೆ ಅವರು ಕಾಡಿಗೆ ಹೋಗಿ, ಪಂಚವಟೀ ವನದಲ್ಲಿ ವಿಹರಿಸುತ್ತಿದ್ದರು". ಹುಂ. "ಆಕೆಯನ್ನು ರಾವಣ ಅಪಹರಿಸಿದ" 'ಹುಂ ಹುಂ' ಎಂದು ಕೇಳುತ್ತಿದ್ದ ಮಗು ಕೃಷ್ಣನು ಕೂಡಲೇ ತನ್ನ ರಾಮಾವತಾರವನ್ನು ಜ್ಞಾಪಿಸಿಕೊಂಡು "ಲಕ್ಷ್ಮಣಾ! ಬಿಲ್ಲೆಲ್ಲಿ? ಬಿಲ್ಲೆಲ್ಲಿ? ಬಿಲ್ಲೆಲ್ಲಿ?" ಎಂದು ವ್ಯಗ್ರವಾಗಿ ನುಡಿದ. ಆ ನುಡಿಗಳು ನಮ್ಮನ್ನು ಕಾಪಾಡಲಿ. ಹೀಗೆಂದು ೧೧ ನೇ ಶತಮಾನದಲ್ಲಿದ್ದ ಭಕ್ತ ಮಹಾಕವಿ ಲೀಲಾಶುಕನು ತನ್ನ ಶ್ರೀಕೃಷ್ಣ ಕರ್ಣಾಮೃತಂ ಎಂಬ ಕಾವ್ಯದಲ್ಲಿ ವಿವರಿಸಿದ್ದಾನೆ. ಆ ಶ್ಲೋಕವನ್ನು ಕೇಳಿ:

ರಾಗ – ಶಹಾನ

ರಾಮೋನಾಮ ಬಭೂವ–ಹುಂ
ತದಬಲಾ ಸೀತೇತಿ–ಹುಂ
ತೌಪಿತುಃ ವಾಚಾ ಪಂಚವಟೀ ವನೇ
ವಿಹರತಸ್ತಾಂ ಆ ಹರದ್ರಾವಣಃ ॥
ನಿದ್ರಾರ್ಥಂ ಜನನೀ ಕಥಾಮಿತಿ
ಹರೇಃ ಹುಂಕಾರತಃ ಶೃಣ್ವತಃ
ಸೌಮಿತ್ರೇ ಕ್ವಧನುರ್ಧನುರಿತಿ
ವ್ಯಗ್ರಾಗಿರಃ ಪಾಂತುನಃ ॥

ಸದಾ ಮಗುವಿನ ಆಟಪಾಟಗಳಲ್ಲೇ ಯಶೋದೆ ನಿರತಳಾಗಿರುತ್ತಿದ್ದಳು. ಶಿಶುರೂಪದಲ್ಲಿದ್ದ ಆ ಲೋಕನಾಯಕನನ್ನು ಆಡಿಸುವ ಯಶೋದೆಯ ಭಾಗ್ಯವನ್ನೇ ಪುರಂದರದಾಸರ ವಾಣಿಯಲ್ಲಿ ಕೇಳಿ:

ಬೇಹಾಗ್–ಆದಿ

ಗೋಪಿಯ ಭಾಗ್ಯವಿದು।
ಶ್ರೀಪತಿ ತಾ ಶಿಶುರೂಪಿನಲ್ಲಿರುವುದು ॥ ಪ ॥

ಕಡು ಮುದ್ದುರಂಗನ ತೊಡೆಯ ಮೇಲಿಟ್ಟುತ
ಜಡೆಯ ಹೆಣೆದು ಹೂ ಮುಡಿಸುತ ಬೇಗ।
ಬಿಡದೆ ಮುತ್ತಿನ ಜಂಡರಳೆಲೆಯನು
ಸಡಗರದಿಂದ ಅಲಂಕರಿಸಿದಳು ॥ ೧ ॥
ದೃಷ್ಟಿ ತಾಗೀತೆಂದು ಇಟ್ಟು ವಿಭೂತಿಯ
ತಟ್ಟೆಯೊಳಗಾರತಿಗಳ ಬೆಳಗೆ
ಥಟ್ಟನೆ ಉಪ್ಪು ಬೇವು ನಿವಾಳಿಸಿ
ತೊಟ್ಟಿಲೊಳಗಿಟ್ಟು ತಾ ತೂಗಿದಳು
ಮಾಧವ ಜೋ ಮಧುಸೂದನ ಜೋ ಜೋ
ಯಾದವರಾಯ ಶ್ರೀರಂಗನೆ ಜೋ
ಆದಿ ಮೂರುತಿ ನಮ್ಮ ಪುರಂದರವಿಠಲನ।
ಆದರದಿಂದ ತಾ ತೂಗಿದಳು ॥ ೨ ॥

(27ನೇ ಪುಟ ನೋಡಿ)

# ಚಿತ್ರಕಲೆಯಲ್ಲಿ ಶ್ರೀಕೃಷ್ಣ

ಶ್ರೀಮನ್ನಾರಾಯಣನ ದಶಾವತಾರಗಳಲ್ಲಿ ಎಂಟನೆಯ ಅವತಾರವಾದ ಶ್ರೀಕೃಷ್ಣ ಪರಮಾತ್ಮನ ಚರಿತ್ರೆಯು ಎದ್ದು ಕಾಣುವಂತಹದು. ಏಳನೆಯ ಅವತಾರವಾದ ಶ್ರೀರಾಮನು ಮರ್ಯಾದಾಪುರುಷೋತ್ತಮನಾಗಿ ಏಕಪತ್ನೀವ್ರತಧಾರಿಯಾದರೆ, ಮತ್ತಿನ ಅವತಾರಿಯಾದ ಶ್ರೀ ಕೃಷ್ಣನು ಸಾವಿರಾರು ಮಾನಿನಿಯರ ಮನದಿಂಗಿತವನ್ನರಿತ ಲೀಲಾ ಮನೋಹಾರಿ. ರಾಮನವಮಿ, ಕೃಷ್ಣಾಷ್ಟಮಿಗಳು ಜಗತ್ತಿನಲ್ಲಿ ಆಚರಿಸಲ್ಪಡುವ ಪ್ರಸಿದ್ಧ ಹಬ್ಬಗಳು

ಭಾರತೀಯ ವಾಙ್ಮಯದಲ್ಲಿ ಕಿ. ಪೂ. ಸಾವಿರದ ಐನೂರರಿಂದ ಮೊದಲೇ ಶ್ರೀ ಕೃಷ್ಣನ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ. ಮುಂದೆ ಹೆಜ್ಜೆ ಹೆಜ್ಜೆಗಳಲ್ಲಿ ಕಾವ್ಯ. ಸಂಗೀತ, ಚಿತ್ರ, ಮೂರ್ತಿ ಹಾಗೂ ಶಿಲ್ಪಕಲೆಗಳಲ್ಲಿ ಶ್ರೀಕೃಷ್ಣನ ವಿವಿಧ ರೂಪಗಳ ದರ್ಶನ ನಮಗಾಗುತ್ತದೆ. ಲಲಿತ ಕಲೆಗಳಲ್ಲೂ, ಕಾವ್ಯಕಲೆಗಳಲ್ಲೂ, ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀ ಕೃಷ್ಣನ ವ್ಯಕ್ತಿತ್ವದ ಮುದ್ರೆ ಅಚ್ಚೊತ್ತಿದಂತಿದೆ. ಬಾಲ ಮುಕುಂದನ ಬಾಲ ಲೀಲೆಯಿಂದ ತೊಡಗಿ ಧರ್ಮ ಸಂಸ್ಥಾಪನಾಚಾರ್ಯನಾಗಿ ಮೆರೆದ ಶ್ರೀ ಕೃಷ್ಣನ ಭವ್ಯ ಜೀವನ ಎಲ್ಲೆಡೆಗಳಲ್ಲಿ ಗುರುತಿಸಲ್ಪಟ್ಟಿದೆ.

ಮುರಳೀ ಲೋಲನಾದ ಬಾಲಕೃಷ್ಣನ ವ್ಯಕ್ತಿತ್ವಕ್ಕೂ ಸಂಗೀತಕ್ಕೂ ಬಹಳ ಹತ್ತಿರದ ನಂಟು. ಬಾಲಕೃಷ್ಣನ ಕೊಳಲಿನ ಕರೆಗೆ ಕೊರಳನ್ನೆತ್ತದ ಗೋವುಗಳಿರಲಾರವು. ಕೃಷ್ಣಭಕ್ತಿಯ ಸಂಪ್ರದಾಯಗಳಲ್ಲಿ ಭಜನೆಗೂ, ಸಂಗೀತಕ್ಕೂ ಬಹಳ ಹೊಂದಾಣಿಕೆಯಿರುತ್ತದೆ ಕರ್ನಾಟಕದ ದಾಸವರೇಣ್ಯರೂ, ಉತ್ತರದ ಭಕ್ತೆ ಮೀರಾಬಾಯಿಯೇ ಮೊದಲಾದ ಸಾಧು ಸಂತರೂ ಕೃಷ್ಣ ಭಕ್ತರಲ್ಲಿ ಅಗ್ರಗಣ್ಯರು. ತಮ್ಮ ಭಜನಾಗೀತಗಳಿಂದ ಭಾವನಾಪರವಶರಾಗಿ ಆನಂದ ಗಾನ ಸುಧೆಯನ್ನು ಹರಿಸಿದವರು ಆ ಮಹಾತ್ಮರು.

"ಅಷ್ಟಛಾಪ" ಕವಿಗಳೆಂದು ಪ್ರಸಿದ್ಧರಾಗಿರುವ ಹಿಂದಿಯ. ಪ್ರಾಚೀನ ಕವಿಗಳಲ್ಲಿ ಸೂರದಾಸರ ಶ್ರೀ ಕೃಷ್ಣ ಪರಮಾತ್ಮನ ಲೀಲಾ ಕೀರ್ತನೆಗಳು ಭಾವುಕ ಜನರ ಹೃದಯರೂಪೀ ವೀಣೆಗಳ ತಂತಿಗಳನ್ನು ಮೀಟುವಂತಹವುಗಳಾಗಿವೆ. ಉಳಿದ ಕವಿಗಳ ಕವಿತೆಗಳೂ ಭಕ್ತಜನರ ಹೃದಯ ಕಮಲಗಳನ್ನು ಅರಳಿಸುವಂತಹ ನೇಸರುಗಳಾಗಿವೆ.

ವಿಕ್ರಮ ರೀತಿಯ ಲೆಕ್ಕಾಚಾರದ ಹದಿನಾರನೇ ಶತಮಾನದ ನಂತರದ ಚಿತ್ರಕಲೆಗಳಲ್ಲಿ ಶ್ರೀಕೃಷ್ಣನ ಇರವು ಗುರುತಿಸಲ್ಪಡುತ್ತದೆ. ಬಾಲ ಕೃಷ್ಣನು ಬೆಳೆದ ಭೂಮಿ ವ್ರಜಭೂಮಿ. ಅಲ್ಲಿಯ ಸಂಸ್ಕೃತಿ ಮತ್ತು ಸಾಹಿತ್ಯಗಳು ಚಿತ್ರಕಲೆಗೆ ಸಾಕಷ್ಟು ಪ್ರೇರಣೆ ಹಾಗೂ ವಸ್ತುಗಳನ್ನು ಒದಗಿಸಿವೆ.

ಎಲ್ಲದಕ್ಕಿಂತ ಮೊದಲು ರಜಪೂತ ಶೈಲಿಯ ಚಿತ್ರಕಲೆಗಳಲ್ಲಿ ಕೃಷ್ಣನು ಕಂಡು ಬರುತ್ತಾನೆ. ಉಳಿದ ಕಿಶನ್‌ಗಡ, ಮೇವಾಡ, ಗಢವಾಲ, ಕಾಂಗಡಾ ಹಾಗೂ ಪರ್ವತೀಯ ಶೈಲಿಗಳೂ ಕೂಡಾ ರಾಜಸ್ಥಾನೀ ಶೈಲಿಯ ಉಪಭೇದಗಳೇ ಆಗಿವೆ, ಎಂದು ಹೇಳಬಹುದಾಗಿದೆ. ಕೃಷ್ಣನ ವಿಷಯದ ಚಿತ್ರಕಾರರಲ್ಲಿ ಮೌಲಾರಾಮ, ಮತ್ತು ನಿಹಾಲ ಚಂದ್ರರು ಮುಖ್ಯರು. ಮೌಲಾರಾಮರ ಎಲ್ಲಾ ಚಿತ್ರಗಳಲ್ಲಿ ರಾಸಮಂಡಲದ ಚಿತ್ರವು ರಾಜಸ್ಥಾನೀ ಶೈಲಿಯ ಸರ್ವೋತ್ಕೃಷ್ಟ ಕೃತಿಯೆಂದು ಹೇಳಲಾಗುತ್ತಿದೆ. ರಾಸಮಂಡಲದ ಕೇಂದ್ರ ಬಿಂದುಗಳಾಗಿ ರಾಧಾಕೃಷ್ಣರು ಇದ್ದು ಅವರ ಸುತ್ತಲೂ ಗೋಪಿಕಾಸ್ತ್ರೀಯರ ಸಮೂಹ ಇದೆ. ಕೃಷ್ಣ ಹಾಗೂ ರಾಧೆಯರ ಮುಖದ ಲಾವಣ್ಯವು ಇತರರದ್ದಕ್ಕಿಂತ ಭಿನ್ನವಾಗಿದ್ದು ಅದ್ಭುತವಾಗಿದೆ. ಆ ಚಿತ್ರದಲ್ಲಿ ಚಿತ್ರಕಾರನು ಪ್ರಯುಕ್ತಿಸಿದ ಜೀವಾತ್ಮ ಪರಮಾತ್ಮನ ಆಧ್ಯಾತ್ಮಿಕ ಪ್ರಪಂಚದ ಪ್ರಭಾವವು ಕಂಡು ಬರುತ್ತದೆ.

ಕೃಷ್ಣನ ಜೀವನಕ್ಕೆ ಸಂಬಂಧ ಪಟ್ಟ ಮೌಲಾರಾಮನ ಅನೇಕ ಚಿತ್ರಗಳು ಈಗ ಉಪಲಬ್ಧವಾಗಿವೆ ಒಂದು ಚಿತ್ರದಲ್ಲಿ ಬಾಲ ಕೃಷ್ಣನು ತನ್ನ ತಾಯಿಯೊಡನೆ ಚಂದ್ರನನ್ನು ಕೈಗೆ ಕೊಡಲು ಹಟಹಿಡಿಯುವ ಮಕ್ಕಳ ಹಟದ ಸುಂದರಭಾವನೆ ಬಿಂಬಿಸಲ್ಪಟ್ಟಿದೆ. ಚಿತ್ರಕಲೆಯ ದೃಷ್ಟಿಯಿಂದ ಅವಲೋಕಿಸಿದಾಗ ಅದು ಬಹಳ ಉತ್ತಮ ಚಿತ್ರವೆಂದು ಪರಿಗಣಿಸಲ್ಪಟ್ಟಿದೆ ಅದೇ ಕಲಾಕಾರರ ಇನ್ನೊಂದು ಚಿತ್ರವು ಗೋವರ್ಧನ ಗಿರಿಧಾರಿ ಕೃಷ್ಣನದ್ದಾಗಿದೆ. ಭಗವಾನ್ ಕೃಷ್ಣ ಪರಮಾತ್ಮನು ತನ್ನ ಕಿರು ಬೆರಳಿನಿಂದ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದಿದ್ದು ಅದರ ಕೆಳಗೆ ವ್ರಜವಾಸಿಗಳೂ, ಅವರ ಗೋಸಂಪತ್ತೂ ಚಿತ್ರಿಸಲ್ಪಟ್ಟಿದೆ. ಇದೂ ಕೂಡಾ ರಾಜಸ್ಥಾನೀ ಶೈಲಿಯ ಮತ್ತೊಂದು ಸರ್ವೋತ್ಕೃಷ್ಟ ನಿದರ್ಶನವಾಗಿದೆ ಬೇರೊಂದು ಚಿತ್ರದಲ್ಲಿ ತನ್ನ ಭಾವನೆಂಟ ಅರ್ಜುನನ ಸಾರಥ್ಯವನ್ನು ವಹಿಸಿದ ಶ್ರೀಕೃಷ್ಣನು ರಥವನ್ನು ಓಡಿಸುತ್ತಿರುವ ಸುಂದರ ದೃಶ್ಯವಿದೆ.

ಹತ್ತೊಂಭತ್ತನೇ ಶತಮಾನದಲ್ಲಿ ಕಿಶನ್‌ಗಢ ಶೈಲಿಯ ಪ್ರಭಾವವು ರಾಜಸ್ಥಾನೀ ಶೈಲಿಯ ಮೇಲೆ ಕಂಡು ಬರುತ್ತದೆ. ರಾಜಾ ಸಮಂತ ಸಿಂಹನ ಆಸ್ಥಾನದಲ್ಲಿ ಶೋಭಿಸುತ್ತಿದ್ದ ಚಿತ್ರಕಾರ ನಿಹಾಲ್ ಚಂದ್ರರು ಕೃಷ್ಣನಿಗೆ ಸಂಬಂಧಿಸಿದ ಅನೇಕ ಚಿತ್ರಗಳನ್ನು ಚಿತ್ರಿಸಿದ್ದರು. ಅವರ ಚಿತ್ರಗಳಲ್ಲಿ ಸೌಂದರ್ಯದಿಂದ ಕೂಡಿದ ರಾಧಾಕೃಷ್ಣರ ಮುಖಾಕೃತಿಯು ಅವರ್ಣನೀಯವಾಗಿದೆ. ಇದೇ ರೀತಿ ಅವರ ಪ್ರೇಮ ವಿಹಾರ ಹಾಗೂ ಕ್ರೀಡೆಗಳ ಸುಂದರ ಚಿತ್ರಗಳೂ ಕೂಡಾ ಮನೋಹರಿಯಾಗಿವೆ

ಮೇವಾಡ ಶೈಲಿಯ ಒಂದು ಚಿತ್ರವು ವಿಕ್ರಮ ಶಕೆಯ ಹತ್ತೊಂಭತ್ತನೇ ಶತಮಾನದ್ದಾಗಿದೆ. ಇದ



ಶ್ರೀ ಪಿ. ಎನ್. ಕೃಷ್ಣಭಟ್ಟ

ಲ್ಲಿ ರಾಧೆಯು ಕೃಷ್ಣನನ್ನು ಬೀಳ್ಕೊಳ್ಳುವ ಹೃದಯಂಗಮ ಚಿತ್ರವಿದೆ. ತೆರಳುತ್ತಿರುವ ಕೃಷ್ಣನನ್ನು ಆಲಿಂಗಿಸಿಕೊಳ್ಳಲೋ ಎಂಬಂತೆ ರಾಧೆಯ ನೀಡಿದ ನಿಡಿತೋಳುಗಳು ರಂಜಿಸುತ್ತಿವೆ. ಆ ಚಿತ್ರದ ಒಂದೆಡೆಯಲ್ಲಿ ಗೋವುಗಳು ನೀರು ಕುಡಿಯುವುದನ್ನೇ ಮರೆತು ತೆರಳುತ್ತಿರುವ ಕೃಷ್ಣನನ್ನು ಈಕ್ಷಿಸುತ್ತಿವೆ. ಕೊಳಲೂದುತ್ತಿರುವ ಕೃಷ್ಣನ ಜಯಪುರ ಶೈಲಿಯ ಚಿತ್ರವು ಹೃನ್ಮನಗಳನ್ನು ಸೂರೆಗೊಳ್ಳುತ್ತದೆ. ಒಂದು ಹಸು ಮೊಗವೆತ್ತಿ ಆತನನ್ನು ದಿಟ್ಟಿಸುವಂತಿದೆ.

ಜಯದೇವ ಮಹಾಕವಿಯ 'ಗೀತಗೋವಿಂದವು ಇತರ ವಿಷಯಗಳಿಗಿಂತ ಹೆಚ್ಚಿಗೆ ಚಿತ್ರಕಲೆಯ ಪ್ರಿಯ ವಿಷಯವಾಗಿದ್ದಿತು ಅಂದರೆ ಅದು ಚಿತ್ರಕಲೆಗಳಿಗೆ ಬೇಕಾದ ವಸ್ತುವನ್ನೊದಗಿಸುತ್ತದೆ. ಗಢವಾಲೀ ಶೈಲಿಯಲ್ಲಿ ಬಿಡಿಸಿದ ಆದರ ಚಿತ್ರ ಚೇತೋಹಾರಿಯಾಗಿದೆ. ಮಳೆಗಾಲದ ರಾಧಾಕೃಷ್ಣರ ಕುಟೀರ ನಿವಾಸವೂ ಗಢವಾಲೀ ಶೈಲಿಯ ಇನ್ನೊಂದು ಮನೋಹರ ಚಿತ್ರವಾಗಿದೆ.

ವಿಕ್ರಮ ಶಕೆಯ 1857 ನೇ ಸಂವತ್ಸರದಲ್ಲಿ ಚಿತ್ರಕಾರ ಮಾಣಿಕರು ಖಸೌಹಲೀ ಶೈಲಿಯಲ್ಲಿ ಗೀತ ಗೋವಿಂದದ ಒಂದೊಂದು ವಿಲಕ್ಷಣ ಕೃತಿಗಳನ್ನು ರಚಿಸಿದ್ದಾರೆ. ಗಢವಾಲೀ ಶೈಲಿಯಲ್ಲಿ ಈಗ ತಾನೇ ಶುಭ್ರಸ್ನಾತಳಾದ ಮಾನಿನಿ ರಾಧೆಯ ಚಿತ್ರವು ಸುಂದರವಾಗಿ ಕಂಗೊಳಿಸುತ್ತದೆ. ಅದು ಬೇಲೂರ ಶಿಲಾಬಾಲಿಕೆಯ ನೆನಪನ್ನು ಹುಟ್ಟಿಸುತ್ತದೆ. ಅಲ್ಲಿಯ ಉಳಿದೆರಡು ಚಿತ್ರಗಳು ಅವರ ಬಾಲ್ಯ ಪ್ರೇಮದ, ಸ್ನೇಹದ ಗುರುತಾದ ಸುದಾಮ ಕೃಷ್ಣರದ್ದಾಗಿದೆ.

ಪಹಾಡೀ ಚಿತ್ರ ಕಲೆಯಲ್ಲಿ ಕಾಂಗಡಾ ಶೈಲಿಯಲ್ಲಿ ಭಾಗವತದ ಪುರಾಣಕಥೆ ಹಾಗೂ ಮಹಾಭಾರತದ ರಮಣೀಯ ಕಥೆಗಳು ಮನದಣಿಯುವಂತೆ ಚಿತ್ರಿಸಲ್ಪಟ್ಟಿವೆ. ವಿಕ್ರಮ ಶಕೆಯ 19ನೇ ಶತಮಾನದಲ್ಲಿ ಚಿತ್ರಿತವಾದ ಶ್ರೀಕೃಷ್ಣನ ಗೋಪಿಕಾಸ್ತ್ರೀಯರ ಸೀರೆ ಅಪಹಾರ ಲೀಲೆಯ ಚಿತ್ರವು ಕಾಂಗಡಾಶೈಲಿಯ ತನ್ನ ವೈಭವವನ್ನು ಪ್ರದರ್ಶಿಸುತ್ತದೆ. ಕವಿತೆಗಳಲ್ಲಿನ ಚಿತ್ರರಚನೆಯೇ ಕಾಂಗಡಾ ಶೈಲಿಯ ವಿಶೇಷತೆಯಾಗಿದೆ.

ಜಯದೇವ ಕವಿಯಿಂದ ರಚಿತವಾದ ಗೀತಗೋವಿಂದವೇ ಇದಕ್ಕೆ ವರದಾನವಾಗಿತ್ತು. ಹೀಗೆ ಇವುಗಳನ್ನು ಅವಲೋಕಿಸಿದಾಗ ಜೀವನದ ಮಧುರ ಕ್ಷಣಗಳಾದ ಶೃಂಗಾರ ರಸವು ಹಬ್ಬಿದ ವೈಶಿಷ್ಟ್ಯವು ಕಂಡು ಬರುತ್ತದೆ. ಹದಿನೇಳನೇ ಶತಮಾನದಿಂದ ಹತ್ತೊಂಭತ್ತನೇ ಶತಮಾನದ ವರೆಗಿನ ಇಂತಹ ಚಿತ್ರಕಲೆಗಳಲ್ಲಿ ಆ ರಸದ ಝರಿಯು ಒಸರಿರುವುದು ಕಂಡು ಬರುತ್ತದೆ.

ಸ್ವತಂತ್ರ ಕಲೆಯಾಗಿ ಬೆಳೆದ ಮೂರ್ತಿಕಲೆಯು ಭಾರತದಕಲೆಗಳಲ್ಲಿನ ಒಂದು ವಿಶಿಷ್ಟಕಲೆಯಾಗಿದೆ. ವಾಸ್ತುಕಲೆಯ ಕುಸುರಿನ ಕೆಲಸಗಳು ಎದ್ದು ಕಾಣುತ್ತವೆ. ಈ ರೀತಿಯ ಮೂರ್ತಿ ಹಾಗೂ ವಾಸ್ತು ಕಲೆಗಳೆರಡರಲ್ಲೂ ಕೃಷ್ಣನ ವ್ಯಕ್ತಿತ್ವ ಒಂದನೇ ಶತಮಾನದಿಂದಲೇ ಕಂಡು ಬರುತ್ತದೆ

ಮಥುರೆಯ ರಾಜಕೀಯ ಸಂಗ್ರಹಾಲಯದಲ್ಲಿರುವ ಪ್ರಥಮ ಶತಮಾನದ ಒಂದು ಮೂರ್ತಿ ಫಲಕದಲ್ಲಿ, ಶ್ರೀಕೃಷ್ಣನನ್ನು ಗೆರಸೆಯಲ್ಲಿಟ್ಟು ಯಮುನಾ ನದಿಯನ್ನು ದಾಟುತ್ತಿರುವ ವಸುದೇವನ ಚಿತ್ರವು ರಚಿಸಲ್ಪಟ್ಟಿದೆ.

ವಿಕ್ರಮ ಸಂವತ್ಸರದ ಐದನೇ ಶತಾಬ್ದಿಯಲ್ಲಿ ಅಂದರೆ ಭಾರತದ ಸುವರ್ಣಯುಗವೆಂದು ಕರೆಯಲ್ಪಡುವ ಗುಪ್ತರಕಾಲದಲ್ಲಿ ನಿರ್ಮಿಸಲ್ಪಟ್ಟ ವಿಶಾಲ ಫಲಕಗಳು ಜೋಧ್‌ಪುರದ ಸಮೀಪದ ಮಂಡೋರಿನಲ್ಲಿ ದೊರೆತಿದ್ದು, ಅವುಗಳಲ್ಲಿ ಕೃಷ್ಣನ ಬಾಲ ಸಾಹಸಗಳು ಚಿತ್ರಿಸಲ್ಪಟ್ಟಿವೆ. ಅವುಗಳಲ್ಲಿ ಶಕಟಾಸುರ ವಧೆ, ಧೇನುಕ ಸಂಹಾರ, ಕಾಳೀಯಮರ್ದನ, ಹಾಗೂ ಗೋವರ್ಧನೋದ್ಧರಣಗಳು ಮುಖ್ಯವಾಗಿವೆ. ಮಥುರಾದಲ್ಲಿ ದೊರೆತ ಒಂದು ಶಿಲಾಫಲಕದಲ್ಲಿಯೂ ಕೂಡಾ ಕಾಳೀಯ ಮರ್ದನದ ನೋಟ ಕಂಡು ಬರುತ್ತದೆ.

ಗುಪ್ತೋತ್ತರ ಕಾಲ ಅಂದರೆ ವಿಕ್ರಮ ಶಕೆಯ ಆರನೆಯ ಶತಮಾನದಲ್ಲಿನ ಕೃಷ್ಣಲೀಲೆಯ ವರ್ಣನೆಗಳು ಬಾದಾಮಿಯಲ್ಲಿರುವ ದುರ್ಗಗಳಲ್ಲಿ ಕಂಡು ಬರುತ್ತವೆ. ಅವುಗಳಲ್ಲಿ ತೃಣಾವರ್ತವಧೆ, ಚಾಣೂರ ಮರ್ದನ, ಕುವಲಯ ಪೀಡಾಸಂಹಾರ ಕಾಳೀಯ ಮರ್ದನವೇ ಮೊದಲಾದ ದೃಶ್ಯಗಳು ಪ್ರಾಮುಖ್ಯವಾಗಿವೆ. ಝಾನ್ಸಿಯ ದೇವಗಢದಲ್ಲಿರುವ ದೇವಾಲಯದ ಗೋಡೆಯಲ್ಲಿ ಕೃಷ್ಣನನ್ನು ಮಲಗಿಸಿಕೊಂಡ ವಸುದೇವನ ಚಿತ್ರವಿದೆ. ಮಥುರಾ ಸಂಗ್ರಹಾಲಯಲ್ಲಿ ವಿಕ್ರಮ ಶಕೆಯ ಆರನೇಶತಮಾನದ ಕಾಳೀಯ ಮರ್ದನ ಹಾಗೂ ಗೋವರ್ಧನ ಗಿರಿಯೆತ್ತುವಿಕೆಯ ಎರಡು ಅನುಪಮ ದೃಶ್ಯಗಳಿರುವ ಹಲಗೆಗಳಿವೆ.

ವಿಕ್ರಮ ಶಕೆಯ ಏಳು ಹಾಗೂ ಎಂಟನೆಯ ಶತಮಾನಗಳ ದೇವಾಲಯದ ಅವಶೇಷಗಳು ಪೂರ್ವ ಬಂಗಾಳದ ಪಹಾರ್‌ ಪುರದಲ್ಲಿ ಸಿಕ್ಕಿವೆ. ಅವುಗಳ ಹೊರ ಆವರಣದ ಮಣ್ಣಿನ ಹಲಿಗೆಗಳಲ್ಲಿ ಕೇಶಿವಧೆ, ಮುಷ್ಟಿಕವಧೆ, ಗೋವರ್ಧನಗಿರಿಧಾರಣ ಯಮಲಾರ್ಜುನ ಉದ್ಧಾರ, ಕಂಸವಧೆಗಳೇ ಮೊದಲಾದ ಕೃಷ್ಣನ ಜೀವನ ಚರಿತ್ರೆಯ ಸುಂದರ ರಮ್ಯ ಕಥಾನಕಗಳು ಚಿತ್ರಿಸಲ್ಪಟ್ಟಿವೆ. ಖಜುರಾಹೋದಲ್ಲಿರುವ ಲಕ್ಷ್ಮಣ ದೇವಾಲಯದಲ್ಲಿ ಕೃಷ್ಣನ ಜೀವನ ಚರಿತ್ರೆಯ ಅನೇಕ ಭಾಗಗಳು ಗುರುತಿಸಲ್ಪಟ್ಟಿವೆ. ಇದರ ನಿರ್ಮಾಣಕಾಲವು ಸುಮಾರು ವಿಕ್ರಮ ಶಕದ ಹನ್ನೊಂದನೆಯ ಶತಮಾನವೆಂದು ತರ್ಕಿಸಲ್ಪಟ್ಟಿದೆ ಅದೇಕಾಲದಲ್ಲಿ ತಯಾರಾದ ಶಕಟಭಂಗ, ಪೂತನಿವಧೆ, ತೃಣಾವರ್ತವಧೆ, ಯಮಲಾರ್ಜುನ ಉದ್ಧಾರ, ಕಾಳೀಯಮರ್ದನ, ಚಾಣೂರವಧೆ, ಹಾಗೂ ಕುಬ್ಜೆಗೆ ವರಾನುಗ್ರಹ ಚಿತ್ರಗಳೂ ಕಂಡು ಬರುತ್ತವೆ.

ವಿಕ್ರಮಶಕೆಯ ಎರಡನೇ ಶತಮಾನವಾದ ಕುಷಾಣಯುಗದಿಂದ ಆರಂಭವಾದ ಕೃಷ್ಣಲೀಲೆಯ ಚಿತ್ರಗಳು ಗುಪ್ತರ ಕಾಲದಲ್ಲಿ ಸ್ವತಂತ್ರ ಕೃತಿಗಳಾಗಿ ಮೆರೆಯುತ್ತಿವೆ. ಕೊಳಲಿನ ನಿನಾದವನ್ನು ಹೊರಡಿಸುವ ಕೃಷ್ಣನ ಮೋಹಕರೂಪವು ಕವಿಗಳ ಬಾಯಿಯಿಂದ ಯಾವ ಮೋಹನ ಮುರಳಿ ಕರೆಯಿತು ಎಂದು ನಿನಾದವನ್ನು ಹೊಡಿಸಿತು. ಚಕ್ರಧಾರಿ ಕೃಷ್ಣನಿಗಿಂತ ನವಿಲಗರಿಯನ್ನು ಹೊತ್ತ, ತುಟಿಗೆ ಮುರಳಿಯ ಮುತ್ತನ್ನೀವ ಬಾಲಕೃಷ್ಣನ ರೂಪ ಆಕರ್ಷಣೀಯ.

ನಮ್ಮ ದೇಶ ಭಾರತವು ಸುಂದರ ಕಲೆಗಳಬೀಡು. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಆಸ್ಸಾಂನಿಂದ ಪಂಜಾಬಿನವರೆಗೆ ದೇಶದ ಉದ್ದಗಲಗಳಲ್ಲಿ ಹರಡಿದ ಸಂಗೀತ ಹಾಗೂ ಶಿಲ್ಪಕಲೆಗಳಲ್ಲಿ ದೇವರ ನಾನಾಲೀಲೆಗಳನ್ನು ನಾವು ಕಂಡು ಪುನೀತರಾಗಬಹುದಾಗಿದೆ. ಅದಕ್ಕೆ ನೋಡುವ ಕಣ್ಣು ಮಿಡಿಯುವ ಮನ ಅತೀ ಅಗತ್ಯ. (ಸಾಧಾರ)



# ಬಾಲಲೀಲಾ ಕ್ಷೇತ್ರಗಳು

ಶ್ರೀಕೃಷ್ಣ ಚರಿತ್ರೆಯನ್ನು ಚಿತ್ರಿಸುವ, ಪುಣ್ಯ ಕ್ಷೇತ್ರಗಳಾಗಿರುವ ಮಥುರಾ, ಗೋಕುಲ, ವೃಂದಾವನಗಳು ಆತನ ಜನ್ಮಸ್ಥಾನ, ಬಾಲ ಲೀಲಾಭೂಮಿ, ಕ್ರೀಡಾ (ವಿಹಾರ) ಪ್ರದೇಶಗಳು 'ವ್ರಜಮಂಡಲ'ದಲ್ಲಿವೆ. ೮೪ ಕೋಸ ವಿಸ್ತೀರ್ಣ ವಾಗಿದ್ದ ವ್ರಜಮಂಡಲದಲ್ಲಿ ಮಧುವನ, ತಾಲವನ ಕುಮುದವನ, ಬ್ರಹದ್ವನ, ಬಹುಲಾವನ, ಕಾಮ್ಯವನ, ಭದ್ರವನ, ಭಂಡಾರವನ, ಖದಿರವನ, ಲೋಹವನ, ಮಹಾವನ, ವೃಂದಾವನ ಗಳೆಂಬ ಹನ್ನೆರಡುವನಗಳು, ಅನೇಕ ಉಪವನ ಗಳು ಇದ್ದವು.

"ಪುಣ್ಯಂ ಮಧುವನಂ ಯತ್ರ ಸಾನ್ನಿಧ್ಯಂ ನಿತ್ಯದಾ ಹರೇಃ॥ ಶ್ರೀಹರಿಯ ಸಾನ್ನಿಧ್ಯವುಳ್ಳ ಮಧುವನವು ಪುಣ್ಯಕರವೆಂದು ಪ್ರಸಿದ್ಧವಾಗಿದೆ. 'ಗೋಕುಲ' ವೆಂಬ ಗ್ರಾಮವು 'ಮಹಾವನ' ವಾಗಿತ್ತೆಂದು ಹೇಳುತ್ತಾರೆ. ಶ್ರೀಕೃಷ್ಣಲೀಲೆಯಲ್ಲಿ 'ವೃಂದಾವನ'ವು ಮಹತ್ವದ ಘಟ್ಟವಾಗಿದೆ. ಪರಮಪಾವನೆಯಾದ ಯಮುನಾನದಿಯು ಇಲ್ಲಿ ಹರಿದಿದೆ. ಶ್ರೀಕೃಷ್ಣನ ಸಾನ್ನಿಧ್ಯ, ಸಾಹಚರ್ಯ ದಿಂದ ಯಮುನೆಯು ಪುಣ್ಯಪ್ರದಳಾಗಿದ್ದಾಳೆ. ಮಥುರಾ, ಗೋಕುಲ, ವೃಂದಾವನಗಳು ಈ ನದಿಯ ತೀರದಲ್ಲಿವೆ, ಪುಣ್ಯಕ್ಷೇತ್ರಗಳಾಗಿವೆ.

## ಮಥುರಾ

ಉತ್ತರಭಾರತದ ಪ್ರಸಿದ್ಧ ನಗರಗಳಲ್ಲಿ ಒಂದಾದ 'ಮಥುರಾ' ಪಟ್ಟಣವು ಪೌರಾಣಿಕ; ಐತಿಹಾಸಿಕ; ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾ ಗಿದೆ. ಪ್ರಾಚೀನಕಾಲದಿಂದಲೂ ಹೆಸರುಗಳಿಸಿದ ಈ ನಗರಿಯನ್ನು ಶ್ರೀರಾಮಚಂದ್ರನ ಚಿಕ್ಕ ತಮ್ಮ ನಾದ ಶತ್ರುಘ್ನನು 'ಲವಣಾಸುರ'ನನ್ನು ಕೊಂದ ಸ್ಮಾರಕಕ್ಕಾಗಿ ಕಟ್ಟಿದನೆಂದು ರಾಮಾಯಣ, ಹರಿವಂಶ ಪುರಾಣಗಳಲ್ಲಿ ಹೇಳಲಾಗಿದೆ. ಯಾದವ ಕುಲದ ಶೂರಸೇನರಾಜರು ಇಲ್ಲಿಯೇ ಇದ್ದು 'ಮಥುರ' ಮತ್ತು ಶೂರಸೇನರಾಜ್ಯಗಳನ್ನು ಆಳಿದರೆಂದೂ 'ಮಥುರಾ' ಪಟ್ಟಣವೇ ಅವರ ರಾಜಧಾನಿಯಾಗಿತ್ತೆಂದು 'ಭಾಗವತ'ದಲ್ಲಿ ನಿರೂಪಿಸಿದ್ದಾರೆ. ಶ್ರೀಕೃಷ್ಣನ ಜನ್ಮಸ್ಥಾನವಾದ ಕಾರಾಗೃಹವು ಇಲ್ಲಿಯೇ ಇದೆ. ಅನೇಕ ಯಾತ್ರಿ ಕರು ಈ ಪವಿತ್ರಸ್ಥಳದ ದರ್ಶನಕ್ಕಾಗಿ ಬರುವರು.

## ಶ್ರೀಕೃಷ್ಣನ ಅವತಾರ

ಉಗ್ರಸೇನರಾಜನ ಮಗನಾದ ಕಂಸನು ನವ ದಂಪತಿಗಳಾದ ಸಹೋದರಿ ದೇವಕಿ, ವಸುದೇವ ರನ್ನು ಸುವರ್ಣಮಯ ರಥದಲ್ಲಿ ಕೂಡ್ರಿಸಿ, ತಾನೇ ಸಾರಥಿಯಾಗಿ ಮಥುರೆಯ ಮಾರ್ಗದಲ್ಲಿ ವೈಭವದಿಂದ ಸಾಗಿದ್ದನು. "ಯಾವದಂಪತಿಗಳ ಮದುವೆಯ ಮಹೋತ್ಸವವನ್ನು ಇಷ್ಟೊಂದು ಉತ್ಸಾಹದಿಂದ ಮಾಡಿರುವೆಯೋ ಅದೇ ದಂಪತಿ ಗಳಿಂದ ಅವತರಿಸಿದ ಎಂಟನೆಯ ಗರ್ಭವು ನಿನಗೆ ಮೃತ್ಯು" ಎಂಬ ಆಕಾಶವಾಣಿಯನ್ನು ಕೇಳಿದನು. ಭಯಭೀತನಾದ ಕಂಸನು ಒಮ್ಮೆಲೆ ಸಿಟ್ಟಿಗೆದ್ದು ಸಹೋದರಿ ದೇವಕಿಯನ್ನು ಕೊಲ್ಲಲು ಉದ್ಯುಕ್ತ ನಾದನು, ಆಗ ವಸುದೇವನು "ಕಂಸಾ, ಪರಾ ಕ್ರಮಿಯಾದ ನೀನು ಇವಳನ್ನು ಕೊಲ್ಲುವುದು ಸರ್ವಥಾಯೋಗ್ಯವಲ್ಲ. ಯಾಕೆಂದರೆ, ಇವಳು ಅಬಲೆ, ನಿನ್ನ ಸಹೋದರಿ, ನವವಿವಾಹಿತಳು. ನಿನಗೆ ಮೃತ್ಯು ಇವಳಲ್ಲ; ಇವಳ ಎಂಟನೆಯ ಗರ್ಭ; ಅವಳಿಂದ ಜನಿಸಿದ ಎಂಟು ಮಕ್ಕಳನ್ನೆಲ್ಲ ನಿನ್ನವಶದಲ್ಲಿ ಕೊಡುವೆ. ಅವರನ್ನು ಕೊಂದರೆ ನಿನಗೆ ಮರಣಭಯವಿಲ್ಲ. ಮರಣಕ್ಕಾಗಿ ಇಷ್ಟೇಕೆ ಹೆದರುವಿ. 'ಜಾತಸ್ಯ ಮರಣಂಧ್ರುವಂ' ಎಂದು ಹೇಳಿಲ್ಲವೇ ? ಈ ರೀತಿ ಸಾಂತ್ವನದ ನುಡಿಗಳನ್ನು ಹೇಳಿ, ತನ್ನ ಮಕ್ಕಳನ್ನು ಹುಟ್ಟಿದ ಕೂಡಲೇ ಆತ ನಿಗೆ ಒಪ್ಪಿಸುವ ಆಶ್ವಾಸನವಿತ್ತನು. 'ಕಾಲನೇಮೀ' ದೈತ್ಯನಾಗಿದ್ದ ಕಂಸನು ವಸುದೇವದೇವಕಿಯರನ್ನು ಮಥುರಾ ಪಟ್ಟಣದ ಕಾರಾಗೃಹದಲ್ಲಿಟ್ಟನು, ಪರಮಾತ್ಮನ ಪರಮಭಕ್ತರಾದ ಸಾತ್ವಿಕದಂಪತಿ ಗಳು ಶ್ರೀಮನ್ನಾರಾಯಣನ ಧ್ಯಾನ ಮಾಡುತ್ತ ಕಾಲಕಳೆಯುತ್ತಿದರು.

ಶ್ರಾವಣ ಕೃಷ್ಣಪಕ್ಷದ ಅಷ್ಟಮಿಯ ಮಧ್ಯ ರಾತ್ರಿ. ಎಲ್ಲ ಕಡೆಗೂ ದಟ್ಟವಾದ ಅಂಧಕಾರ ಹಬ್ಬಿತ್ತು. ಸಾತ್ವಿಕರು ಶಾಂತವಾದ ಈ ವೇಳೆ ಯಲ್ಲಿ ಧ್ಯಾನ ಪ್ರಾರ್ಥನೆಗಳಲ್ಲಿ ತೊಡಗಿದ್ದರು. ಆಕಾಶದಲ್ಲಿ ಅಸಂಖ್ಯಾತ ತಾರೆಗಳು ಅಸಾಮಾನ್ಯ ಕಾಂತಿಯಿಂದ ಬೆಳಗುತ್ತಿದ್ದವು. ಚಂದ್ರನು ಆದೇ ಉದಯವಾಗುತ್ತಲಿದ್ದನು. ರೋಹಿಣೀ ನಕ್ಷತ್ರವು ಆಕಾಶದ ಮಧ್ಯಕ್ಕೆ ಏರುತ್ತಲಿದ್ದಿತು. ದೇವ ದುಂದುಭಿಗಳು ಮೊಳಗಿದವು ಅಪ್ಸರೆಯರು ನರ್ತನಮಾಡಿದರು. ದೇವತೆಗಳು ತಮ್ಮ ವಾಯು ರಥದಲ್ಲಿ ಕುಳಿತುಕೊಂಡು ಭೂಮಿಯಲ್ಲಿ ಜರುಗ ಲಿರುವ ಶುಭ ಪ್ರಸಂಗವನ್ನು ನೋಡಲು ಆಕಾಶ ಮಾರ್ಗದಲ್ಲಿ ನಿಂತರು.

ಇಂತಹ ಸುಸಮಯದಲ್ಲಿ ಸರ್ವೋತ್ತಮನಾದ ಶ್ರೀಮನ್ನಾರಾಯಣನು ಪೂರ್ಣಾವತಾರಿಯಾಗಿ ದೇವಕಿಯ ಗರ್ಭದಿಂದ ಪ್ರತ್ಯಕ್ಷನಾದನು. ಸೂರ್ಯಕಾಂತಿಯಿಂದ ಧರೆಯೆಲ್ಲವೂ ಬೆಳಗು ವಂತೆ, ಕಾರಾಗೃಹದಕೋಣೆಯು ಮಗುವಿನ ಕಾಂತಿಯಿಂದ ಬೆಳಗಹತ್ತಿತು. ತಂದೆತಾಯಿಗಳ ಅಂಜಿಕೆ, ತೊಂದರೆಗಳು ಅಂಧಕಾರದಂತೆ ದೂರ ವಾದವು. ಅವರು ಆನಂದಪರವಶರಾದರು. ಹುಟ್ಟಿದಕೂಸು ಸಾಮಾನ್ಯ ಮಗುವಾಗಿರಲಿಲ್ಲ. ಸಾಕ್ಷಾತ್ ವಿಷ್ಣುವೇ ಚತುರ್ಭುಜಗಳಲ್ಲಿ ಶಂಖ, ಚಕ್ರ, ಗದಾ, ಕಮಲಮಂಡಿತನಾಗಿ, ಶ್ರೀವತ್ಸ, ಹಾಗೂ ಕೌಸ್ತುಭಮಣಿಮಾಲೆಗಳನ್ನೂ ಧರಿಸಿ, ಕರ್ಣಕುಂಡಲಧಾರಿಯಾಗಿ, ಪೀತಾಂಬರನಾಗಿ, ಕಾಂತಿಯಲ್ಲಿ ಮೇಘಶ್ಯಾಮನಾಗಿ ಪ್ರಕಟನಾ ಗಿದ್ದನು. ಮಗುವಿನ ಮುದ್ದುಮುಖದ ಸೌಂದ ರ್ಯಕ್ಕೆ ಮೋಹಿತರಾದರು. ಪರಮ ಪುರುಷನ



ಶ್ರೀ ಬಿ. ಎಂ. ಗುಡಿ

ಅವತಾರದಿಂದ ದಿಕ್ಕುಗಳು ಪ್ರಸನ್ನವಾದವು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡುವಂತೆ ಜಡಿಮಳೆಯು ಪ್ರಾರಂಭವಾಗಿತ್ತು. ಮಗುವಾಗಿ ಅವತರಿಸಿ ಬಂದ ಅದ್ಭುತ ಬಾಲಕನನ್ನು ಕಂಡು ವಸುದೇವದೇವಕಿಯರು ಆಶ್ಚರ್ಯಪಟ್ಟರು. ವಸುದೇವನು ಸಂತೋಷದಿಂದ ಸ್ತೋತ್ರಮಾಡಿದನು ಪರಮಾತ್ಮನು ಅವರಿಗೆ ಪೂರ್ವಜನ್ಮದ ಸ್ಮರಣೆ (ಪೃಶ್ನಿ, ಸುತಪಾ ಜನ್ಮದ ನೆನಪು) ಕೊಟ್ಟು ಪವಿತ್ರ ಜೀವಿಗಳಾದ ಅವರಿಂದ ತಾನು ಅವತರಿಸಿದ್ದನ್ನು ತಿಳಿಸಿದನು. ಮಗುವಾಗಿ ಜನಿಸಿದ ಶ್ರೀಕೃಷ್ಣನ ಬಗ್ಗೆ ವಸುದೇವದೇವಕಿಯರಲ್ಲಿ ಅಪರಿಮಿತ ಪ್ರೀತಿ ಇದ್ದರೂ, ಕಂಸನ ಭೀತಿಯಿಂದ ಚಿಂತಾಕುಲರಾದರು. ಭಗವಂತನ ಆದೇಶದಂತೆ ವಸುದೇವನು ಆ ಮಗುವನ್ನು ಸೂತಿಕಾಗೃಹದಿಂದ ಎತ್ತಿಕೊಂಡು ಹೊರಗೆ ಬಂದನು. ದ್ವಾರಪಾಲಕರು ನಿದ್ರಾಪರವಶರಾಗಿದ್ದರು, ಮಳೆಯ ನೀರು ಕೂಸಿನ ಮೇಲೆ ಬೀಳಬಾರದೆಂದು ಆದಿಶೇಷನು ತನ್ನ ಸಾವಿರ ಹೆಡೆಗಳನ್ನು ಛತ್ರಿಗೆಯಂತೆ ಪಸರಿಸಿ ಹಿಂಬಾಲಿಸಿದನು. ಮಳೆಗಾಲವಾದದ್ದರಿಂದ ಯಮುನಾ ನದಿಯು ತುಂಬಿ ಹರಿಯುತ್ತಿತ್ತು. ಶ್ರೀಕೃಷ್ಣನ ಆಗಮನವನ್ನು ಅರಿತ ಅವಳು ಭೋರ್ಗರೆದು ದರ್ಶನಾಪೇಕ್ಷೆಯಿಂದ ಮೇಲಕ್ಕೇರ ಹತ್ತಿದಳು. ಶ್ರೀಕೃಷ್ಣನ ಪಾದದ ಅಂಗುಟವು ತಾಗಲು ಕೆಳಕ್ಕಿಳಿದು ದಾರಿಕೊಟ್ಟಳು. ಮುಂದೆ ವಸುದೇವನು ಗೋಕುಲಕ್ಕೆ ಹೋಗಿ ಯಶೋದೆಯ ಹಾಸಿಗೆಯ ಮಲಗಿಸಿ ಹೆಣ್ಣು ಮಗುವನ್ನೆತ್ತಿ ತಂದು ದೇವಕಿಯ ಸೂತಿಕಾಗೃಹದಲ್ಲಿಟ್ಟನು. ಕಾರಾಗಾರವು ಮೊದಲಿನಂತೆ ಬಂಧಿತವಾಯಿತು.

## ಗೋಕುಲ

ಶ್ರೀಕೃಷ್ಣನು ಗೋಕುಲಕ್ಕೆ ಬಂದದ್ದು ಕಂಸನ ಭಯದಿಂದಲ್ಲ. ತನ್ನ ಬಂಧು-ಬಾಂಧವರನ್ನು ಸೇರಿಕೊಂಡು ತನ್ನ ಅದ್ಭುತಲೀಲೆಗಳನ್ನು ತೋರುವುದಕ್ಕಾಗಿ ಬಂದನು. 'ಮಹಾವನ' ವೆಂದು ಕರೆಯಲ್ಪಟ್ಟ ಗೋಕುಲವು ಮಥುರೆಯಿಂದ ೯ ಕಿ.ಮೀ. ದೂರದಲ್ಲಿದೆ. ಬಾಲಕೃಷ್ಣನು ಗೋಪಾಲಕರೊಡನೆ ಬೆಳೆದನು. ನಂದಭುವನ, ದಧಿಮಂಥನ, ಸೂತಿಕಾಗೃಹ, ನಂದಗೋಪ, ಹಾಗೂ ಬಲರಾಮರ ಅರಮನೆಗಳು ದರ್ಶನೀಯವಾಗಿವೆ. ಶ್ರೀಕೃಷ್ಣನ ಆಂದೋಲನಪೂಜೆ (ತೊಟ್ಟಿಲು ತೂಗುವುದು) ಇಲ್ಲಿಯ ವೈಶಿಷ್ಟ್ಯ. ಭಾವಿಕರಾದ ಯಾತ್ರಿಕರು ಈ ಎಲ್ಲ ಸ್ಥಳಗಳನ್ನು ನೋಡಿ, ಪೂಜಾದಿಗಳನ್ನು ಮಾಡಿ ಭಕ್ತಿಭಾವದಿಂದ ಕಾಣಿಕೆಗಳನ್ನರ್ಪಿಸುವರು ಅಲಂಕರಿಸಿದ ಬಾಲಕೃಷ್ಣನನ್ನು ತೊಟ್ಟಿಲಲ್ಲಿ ಮಲಗಿಸಿ 'ಜೋಗುಳ' ಹೇಳುವರು.

ಕಂಸನಿಂದ ಪ್ರೇರಿಸಲ್ಪಟ್ಟ 'ಪೂತನೆ' ಯೆಂಬ ಅಸುರಿಯು ಗೋಕುಲಕ್ಕೆ ಆಗಮಿಸಿ ಬಾಲಕೃಷ್ಣನನ್ನು ಎತ್ತಿಕೊಂಡು, ತನ್ನ ಮೊಲೆಹಾಲನ್ನು ಕುಡಿಸಲು ಉಪಕ್ರಮಿಸಿದಳು. ಬಾಲರೂಪಿಯಾದ ಕೃಷ್ಣನು ಅವಳ ಪ್ರಾಣವನ್ನೇ ಹೀರಿದನು. ಇದರ ಕುರುಹು 'ಗೋಕುಲ' ದಲ್ಲಿದೆ. ನಾಲ್ಕನೆಯ ತಿಂಗಳಲ್ಲಿ ಜನ್ಮ ನಕ್ಷತ್ರದಿಂದ ಕೂಡಿದ ದಿನ ಮಗು (ಕೃಷ್ಣ)ನನ್ನು ಅಲಂಕರಿಸಿ ದೇವದರ್ಶನಕ್ಕಾಗಿ ಹೋಗಿಬರುವ ಸಮಾರಂಭ (ಉತ್ಥಾನಕ) ದಂದು ಬಂಡಿಯಗಾಲಿಯಲ್ಲಿ ಅಡಗಿದ ದುಷ್ಟ ಶಕಟಾಸುರನನ್ನು ಒದ್ದು ಕೆಡಹಿದನು. ಆಗ ಬ್ರಾಹ್ಮಣರು ವೇದೋಕ್ತ ಮಂತ್ರಗಳಿಂದ ಆತನನ್ನು ಆಶೀರ್ವದಿಸಿದರು. ಮತ್ತೊಂದು ದಿನ ಮುದ್ದುಕೃಷ್ಣನು ತಾಯಿ ಯಶೋದೆಯ ತೊಡೆಯಲ್ಲಿರುವಾಗ ಆತನ ಭಾರವು ಹೆಚ್ಚಾಗ ಹತ್ತಿತು. ಮಗುವನ್ನು ಕೆಳಗಿಳಿಸಿದಳು. ಕಂಸನಿಂದ ಕಳುಹಲ್ಪಟ್ಟ 'ತೃಣಾವರ್ತಾಸುರ'ನು ದೊಡ್ಡ ಬಿರುಗಾಳಿಯಾಗಿ ಚಕ್ರಾಕಾರವಾಗಿ ತಿರುಗಹತ್ತಿದನು. ಎಲ್ಲ ವಸ್ತುಗಳನ್ನು ಎತ್ತುವಂತೆ, ಆಗ ಕೃಷ್ಣನನ್ನು ಎತ್ತಿದನು. ಕೃಷ್ಣನು ಆತನನ್ನು ಅಂತರಿಕ್ಷದಿಂದ ಭೂಮಿಗೆ ಕೆಡಹಿಕೊಂದನು. ಇದನ್ನು ಕಂಡ ತಂದೆತಾಯಿಗಳು ಅವನನ್ನು ಗಟ್ಟಿಯಾಗಿ ಅಪ್ಪಿಕೊಂಡರು.

ಉದ್ದಂಡ ಉತ್ಪಾತದಿಂದ ಗೆಲಿದನು. ಎಂದು ಗೋಪಾಲಕರು ಸಂತೋಷಪಟ್ಟರು. ಒಂದುದಿನ ಯಶೋದಾಮಾತೆಯು ಮೊಲೆಹಾಲು ಕುಡಿದ ಆಕಳಿಸುವಾಗ ಬಾಯಿಯಲ್ಲಿ 'ಬ್ರಹ್ಮಾಂಡವನ್ನೇ' ತೋರಿದನು, ಉತ್ಪಾತಗಳಿಂದ ಬಾಧೆಯಾಗಬಾರದೆಂದು ನಂದಗೋಪನು 'ಗರ್ಗ' ಗುರುಗಳಿಂದ ನಾಮಕರಣ ಸಮಾರಂಭ ಮಾಡಿಸಿದನು. ಹಿರಿಯನಿಗೆ 'ಬಲರಾಮ' ನೆಂದಲೂ ಕಿರಿಯನಿಗೆ 'ಕೃಷ್ಣ' ನೆಂತಲೂ ಕರೆದರು. ಬಲರಾಮ, ಕೃಷ್ಣರು ಅಂಬೆಗಾಲಿಡುತ್ತ, ತೊದಲ್ನುಡಿಯುತ್ತ, ತೋಳು ಬೀಸುತ್ತ ಬಾಲಲೀಲೆಗಳನ್ನು ತೋರಿದರು. ಅವರು ದೊಡ್ಡವರಾಗುತ್ತ ಬಂದಾಗ ಅವರನ್ನು ಹಿಡಿಯುವವರಿದ್ದಿಲ್ಲ, ಅವರು ನಿರ್ಭಯರು, ಸ್ವೇಚ್ಛೆಯಿಂದ ಆಕಳ ಹಿಂಡುಗಳನ್ನು ಒಯ್ಯು ಮೇಯಿಸಿಕೊಂಡು ಬರುತ್ತಿದ್ದರು ಗೋಪಾಲಕರೊಡನೆ ಆಟವಾಡುತ್ತಿದ್ದರು. ಗೋಪಿಯರ ಮನೆಗಳಲ್ಲಿಯ ಹಾಲು ಮೊಸರು ಬೆಣ್ಣೆಗಳನ್ನು ಕದ್ದು ಸೂರೆಗೊಳಿಸುತ್ತಿದ್ದರು. ಗೋಪಸ್ತ್ರೀಯರ ದೂರುಗಳನ್ನು ಕೇಳಿ ಬೇಸತ್ತ ಯಶೋದೆಯು ಮಗು ಕೃಷ್ಣನನ್ನು ಒಂದು ಒರಳಿಗೆ ಕಟ್ಟಿ ಹಾಕಿದಳು, ಕೃಷ್ಣನು ಅಂಬೆಗಾಲಿಕ್ಕುತ್ತ ಯಮಳ ಅರ್ಜುನ ವೃಕ್ಷಗಳ ಮಧ್ಯದಲ್ಲಿ ಬಂದು ಮುಂದೆ ಸಾಗಿದನು, ಆ ಹಳೆಯ ಗಿಡಗಳು ಮುರಿದು ಬಿದ್ದವು. ನಾರದರ ಶಾಪದಿಂದ ಕುಬೇರನ ಮಕ್ಕಳು ವೃಕ್ಷರೂಪರಾಗಿದ್ದರು. ಅವರ ಶಾಪವಿಮೋಚನೆ ಮಾಡಿದವನು ಕೃಷ್ಣನು.

ಇವೆಲ್ಲ ಉತ್ಪಾತಗಳಿಂದ ಬಾಲಕೃಷ್ಣನು ದೂರವಾಗಿರಬೇಕೆಂದು ಬಯಸಿ ಗೋಪಾಲಕರು ಗೋಕುಲವನ್ನು ಬಿಡಲು ನಿಶ್ಚಯಿಸಿದರು. ಇದಲ್ಲದೆ ಅದ್ಭುತ ಕಾರ್ಯಗಳಿಂದ ಬೆಳೆದ ಕೃಷ್ಣನು ನರ್ತನ, ಗಾಯನ, ಅನುಕರಣ ಮೊದಲಾದ ಮನೋರಂಜಕ ವಿಷಯಗಳಿಂದ ಕಾಲಕಳೆಯಲು ಬಯಸಿದನು. ಆದಕ್ಕಾಗಿ ಅವರು ವೃಂದಾವನಕ್ಕೆ ವಲಸೆ ಹೋಗಬೇಕಾಯಿತು

ವೃಂದಾವನವು ಮಥುರೆಯಿಂದ ೧೩ ಕಿ.ಮೀ. ದೂರದಲ್ಲಿದೆ. ಯಾವ ಸ್ಥಳದಲ್ಲಿ ಶ್ರೀಕೃಷ್ಣನು ಗೋಪಿಯರೊಡನೆ ತನ್ನ ಲೀಲೆಗಳನ್ನು ಬೀರಿ, ರಾಸಕ್ರೀಡಾದಿಗಳನ್ನು ಮಾಡಿದನೋ ಅಂತಹ ವೃಂದಾವನವು ನಿಸರ್ಗ ರಮಣೀಯವಾಗಿದೆ. ಯಮುನಾನದಿಯು ಹರಿಯುತ್ತಿದೆ. ಶ್ರೀಕೃಷ್ಣನ ಲೀಲೆಗಳನ್ನು ವರ್ಣಿಸುವ ಅನೇಕ ಘಾಟಗಳು ಇಲ್ಲಿವೆ. ಇವುಗಳಲ್ಲಿ ಹನ್ನೆರಡು ಘಾಟಗಳು ಪ್ರಸಿದ್ಧವಾಗಿವೆ.

'ಕಾಲಿಯಾಮರ್ದನ ಘಾಟ'ದಲ್ಲಿ ಬಾಲಕೃಷ್ಣನು ಉಗ್ರವಿಷದಿಂದ ಕೂಡಿದ ಅಹಿರಮಣನಾದ

(31 ನೇ ಪುಟ ನೋಡಿ)

## ಪ್ರಕಟಣೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

# ಜನಪದಸಾಹಿತ್ಯದಲ್ಲಿ ಭಕ್ತಿ

ಯಾವುದೇ ದೇಶಭಾಷೆಯ ಸಾಹಿತ್ಯದಲ್ಲಿಯೂ ಒಂದು ಪ್ರಮುಖವಾದ ವಿಶಿಷ್ಟ ಸಾಹಿತ್ಯ ಪ್ರಕಾರ ಸೃಷ್ಟಿಯಾಗಿ ಜನಜೀವನದ ಎಲ್ಲ ಆಸೆ ಆಕಾಂಕ್ಷೆಗಳು, ನೋವು ನಲಿವುಗಳು, ಸೊಗಸು ಸೊಗಡುಗಳನ್ನೂ ಯಥಾರ್ಥವಾಗಿ ಚಿತ್ರಿಸುವ ಸಾಹಿತ್ಯವಾಗಿ ನಿರಂತರವಾಗಿ ಪ್ರವಹಿಸಿರುವುದನ್ನು ಕಾಣುತ್ತೇವೆ. ಇದೇ ಜನಸಾಮಾನ್ಯರಿಂದ ರಚಿತವಾದ ಜನಪದ ಸಾಹಿತ್ಯ. ಯಾವುದೇ ಜನಾಂಗದ ಸಂಸ್ಕೃತಿ ಆಚಾರ ವಿಚಾರ ಆದರ್ಶಗಳನ್ನು ತಿಳಿಯಬೇಕಾದರೆ ಜನಪದ ಸಾಹಿತ್ಯ ಒಂದು ಮುಖ್ಯ ಸಾಧನವಾಗುತ್ತದೆ. ಒಂದು ಜನಾಂಗದ ಜೀವನ ಸಂಪತ್ತು ಈ ಜನಪದ ಸಾಹಿತ್ಯ.

ಭಾವನೆಗಳ ಅಭಿವ್ಯಕ್ತಿಗೆ ವಿದ್ವತ್ತಿನ ಅವಶ್ಯಕತೆ ಇರದು. ಗ್ರಾಮೀಣ ಜನರು ತಮ್ಮ ಬದುಕಿನ ಸುಖ ದುಃಖಗಳಿಗೆ ಆಶೆ ನಿರಾಶೆಗಳಿಗೆ ಸ್ಪಂದಿಸಿದಾಗ ಅವರ ಉಸಿರಾಗಿ ಬಾಳಹಸಿರಾಗಿ ಈ ಸಾಹಿತ್ಯ ಸೃಷ್ಟಿಯಾಯಿತು. ಬಾಯಿಂದ ಬಾಯಿಗೆ ಹರಿದು ಬಂದಿರುವ ಈ ಸಾಹಿತ್ಯ ಅಜ್ಞಾತ ಕವಿಗಳ ಸ್ಮರಣಾರ್ಥವಾಗಿ ಇಂದಿಗೂ ಉಳಿದಿದೆ.

ಬದುಕಿನ ಹಲವು ಮುಖಗಳನ್ನು ಚಿತ್ರಿಸುವಲ್ಲಿ ಜನಪದ ಸಾಹಿತ್ಯದಲ್ಲಿ ಕಂಡು ಬರುವ ಅನನ್ಯವಾದ ರಮಣೀಯತೆ ಮನೋಹರ ಕಲ್ಪನೆ, ಸರಳತೆ, ಮುಗ್ಧತೆ, ಮಾನವೀಯತೆ ಇವುಗಳು ನಮ್ಮನ್ನು ಆಶ್ಚರ್ಯಗೊಳಿಸುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಅವರ ಜೀವನ ಶ್ರದ್ಧೆಗೆ ಮನಸ್ಸು ನಮಿಸುತ್ತದೆ.

ವೈವಿಧ್ಯಪೂರ್ಣವಾದ ಜನಪದ ಸಾಹಿತ್ಯ ವಿವಿಧ ಪ್ರಕಾರಗಳಲ್ಲಿ ಹರಿದಿದೆ. ಜನಪದ ಗೀತೆ, ಕಥೆ, ಲಾವಣಿ, ಒಗಟು, ಗಾದೆ, ಕೋಲಾಟದ ಹಾಡುಗಳು, ಇನ್ನೂ ಮುಂತಾದ ವಿಭಾಗಗಳನ್ನು ಗುರುತಿಸಬಹುದು. ಇವೆಲ್ಲದರ ಉದ್ದೇಶ ಅಂದಿನ ಸಮಾಜವನ್ನು ಪ್ರತಿಬಿಂಬಿಸುವುದೇ ಆಗಿದೆ. ಜನಪದ ಕವಿ ತನ್ನ ದಿನ ನಿತ್ಯದ ಬದುಕಿನಲ್ಲಿ ಬರುವ ಬಯಕೆ, ಬೇಡಿಕೆ, ಸಂಕಟ, ಸಮಸ್ಯೆ, ಶಾಂತಿ ಅಶಾಂತಿಗಳಿಗೆ ಹಾಡಿನ ಮೂಲಕ ಜೀವ ಕೊಟ್ಟಿದ್ದಾನೆ. ಅವು ಅಂದಿನ ಸಮಾಜದ ಜೀವಧ್ವನಿಯಾಗಿ ವಾಚಕರ ಮನಸ್ಸು ಹೃದಯಗಳನ್ನು ಸೂರೆಗೊಳ್ಳುತ್ತವೆ.

ಜನಪದ ಸಾಹಿತ್ಯದಲ್ಲಿ ನಮಗೆ ವಿಶೇಷವಾಗಿ ದೊರೆತಿರುವುದು ಜನಪದಗೀತೆಗಳು. ಅಚ್ಚಕನ್ನಡ ಛಂದಸ್ಸಾದ ತ್ರಿಪದಿಯಲ್ಲಿ ಸಾವಿರಗಟ್ಟಲೆ ಗೀತೆಗಳನ್ನು ರಚಿಸಿದ್ದಾರೆ. ಅಂದಿನ ಬದುಕಿನ ವಾಸ್ತವ ಚಿತ್ರಣವೇ ಈ ಜನಪದಗೀತೆಗಳು. ಸಂಪ್ರದಾಯ, ಸಂಸ್ಕೃತಿ, ಜೀವನದ ಆದರ್ಶಗಳನ್ನು ಸಾರುವ ಈ ಗೀತೆಗಳು ಇಂದಿಗೂ ಕನ್ನಡ ನಾಡಿನ ಉದ್ದಗಲಕ್ಕೂ ಪ್ರಚಾರದಲ್ಲಿವೆ. ಅನನ್ಯವಾದ ಕಲಾಸಿದ್ಧಿಯನ್ನು ಸಾಧಿಸಿರುವ ಈ ಜನಪದಗೀತೆಗಳು ಮುಂದಿನ ಹೊಸ ಕಾವ್ಯ ರಚನೆಗೆ ಪೋಷಣೆ, ಪ್ರೇರಣೆಗಳನ್ನು ನೀಡಿದವು.

ಜನಪದ ಗೀತೆಗಳಲ್ಲಿ ಜೀವನ ಮೌಲ್ಯಗಳಾದ ಪ್ರೀತಿ, ಸ್ನೇಹ, ನಂಬಿಕೆ, ಭಕ್ತಿ ಇವುಗಳನ್ನು ಪ್ರಧಾನವಾಗಿ ಕಾಣುತ್ತೇವೆ. ಅಂದಿನ ಸಮಾಜದಲ್ಲಿ ಜನರಿಗೆ ಧರ್ಮ, ದೈವ ಇವುಗಳಲ್ಲಿ ಅಚಲವಾದ ನಂಬಿಕೆ ಇದ್ದಿತು. ಜನರು ಅನ್ಯಾಯ ಅಧರ್ಮಗಳನ್ನು ವಿರೋಧಿಸುತ್ತಿದ್ದರು. ಸಲ್ಲದ್ದನ್ನು ಆಚರಿಸಿದರೆ ದೈವ ಮುನಿಯುತ್ತದೆ ಎಂಬ ಭೀತಿ ಅವರಲ್ಲಿ ಸದಾ ಇರುತಿತ್ತು. ಧರ್ಮ ಅಧರ್ಮಗಳ ವಿಚಾರದಲ್ಲಿ ಅವರಿಗೆ ಗೊಂದಲವಿರಲಿಲ್ಲ. ಧರ್ಮದ ಹಾದಿ ಸ್ಪಷ್ಟವಾಗಿ ಗೋಚರಿಸುತ್ತಿದೆ, ಆ ಮಾರ್ಗದಲ್ಲಿಯೆ ನಡೆಯಬೇಕು ಎಂದು ಅವರು ತಿಳಿದಿದ್ದರು. ಜೀವನದಲ್ಲಿ ಯಾವುದೇ ಕಷ್ಟ ಬಂದರೂ ಅದನ್ನು ಪರಿಹರಿಸುವ ಶಕ್ತಿ ದೇವರೆಂದು ದೃಢವಾಗಿ ನಂಬಿ ತಮ್ಮ ಬದುಕಿನ ನೋವನ್ನು ಆತನಿಗೆ ಒಪ್ಪಿಸಿ ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಿದ್ದರು. ಭಕ್ತಿ ಎಂಬುದು ಜೀವನಶ್ರದ್ಧೆಯಾಗಿ ಅವರ ಬದುಕಿನಲ್ಲಿ ಬೆರೆತುಹೋಗಿತ್ತು. ಇಂದಿಗೂ ಹಳ್ಳಿಯ ಮುಗ್ಧ ಬಾಳಿನಲ್ಲಿ ಭಕ್ತಿ ಪಾರಮ್ಯವನ್ನು ಕಾಣಬಹುದು. ಭಕ್ತಿ ಭಾವನೆ ಅವರ ಅಂತರಂಗದಲ್ಲಿ ಹುಟ್ಟಿ ಯಾವ ಕೋರಿಕೆಯೂ ಇಲ್ಲದೆ ಜನಪದ ಭಕ್ತಿಗೀತೆಗಳಲ್ಲಿ ಪ್ರವಹಿಸಿದೆ. ಅಂದಿನ ಜನರಿಗೆ ಭಕ್ತಿಯೇ ಜೀವನದ ಆಸರೆಯಾಗಿದ್ದಿತು. ತಮ್ಮ ಜೀವನದ ಆಗು ಹೋಗುಗಳನ್ನು ನಿರ್ಧರಿಸುವ ಶಕ್ತಿಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದರು. ಆದ್ದರಿಂದಲೇ ಭಗವಂತನ ಮಹಿಮೆಗಳನ್ನು ಮನದುಂಬಿ ಹಾಡಿದ್ದಾರೆ. ಅವರ ಹಾಡುಗಳಲ್ಲಿ ಆರ್ತತೆ, ನಿರ್ಮಲವಾದ ಅಂತಃಕರಣ, ಅಗಾಧ ದೈವಶ್ರದ್ಧೆ- ಇವುಗಳು ತುಂಬಿವೆ.

ಜನಪದ ಗೀತೆಗಳಲ್ಲಿ ಕ್ಷೇತ್ರ ಮಹಾತ್ಮೆ ಸ್ಥಳಪುರಾಣ, ಪೌರಾಣಿಕ ಕಥೆಗಳನ್ನು ಹೇಳಿದ್ದಾರೆ. ಓರ್ವ ಮುಗ್ಧ ಭಕ್ತ ಜೀವ ದೇವರನ್ನು ಹೇಗೆ ಕಾಣಬಲ್ಲ, ಏನೆಂದು ಪ್ರಾರ್ಥಿಸಬಲ್ಲ—ಎಂಬುದು ಈ ಎಲ್ಲ ಭಕ್ತಿಗೀತೆಗಳ ಮುಖ್ಯ ಅಂಶವಾಗಿರುತ್ತದೆ. ನೇಮ ನಿಷ್ಠೆ ವ್ರತೋಪವಾಸಗಳನ್ನು ಅರಿಯದ ಹಳ್ಳಿಯ ಜನತೆ ದೇವರನ್ನು ತಮ್ಮ ಹತ್ತಿರದ ವ್ಯಕ್ತಿಯೆಂದೇ ಭಾವಿಸಿದರು. ಆದ್ದರಿಂದಲೆ ಅವರ ಭಕ್ತಿಗೀತೆಗಳಲ್ಲಿ ಉತ್ಕೃಷ್ಟವಾದ ಪ್ರೇಮವಿದೆ. ಅವರ ನಿರ್ಮಲ ಭಕ್ತಿಗೆ, ಹೃದಯ ಸಂಸ್ಕಾರಕ್ಕೆ ಈ ಭಕ್ತಿಗೀತೆಗಳೇ ಸಾಕ್ಷಿಯಾಗಿವೆ.

ಸಾಮಾನ್ಯ ಜನತೆಯ ಹೃದಯದಲ್ಲಿ ಹುಟ್ಟಿ ಹರಿದ ಗೀತೆಗಂಗೆಯ ಮಂಜುಳ ನಿನಾದವನ್ನು ಆಲಿಸಿದಾಗ ನಮ್ಮ ಮನಸ್ಸು ಭಕ್ತಿಭಾವದಿಂದ ಪುಳಕಗೊಳ್ಳುತ್ತದೆ.

ಸೂರ್ಯೋದಯ ಸಕಲ ಜೀವರಾಶಿಗೂ ಹೊಸ ಚೈತನ್ಯವನ್ನು ನೀಡುತ್ತದೆ. ಸರ್ವರೂ ಸೂರ್ಯೋದಯವನ್ನು ಸಂತೋಷದಿಂದ ಆಹ್ವಾನಿಸುತ್ತಾರೆ. ಜನಪದ ಕವಿಗಳು ಸೂರ್ಯದೇವನಿಗೆ ಹೇಗೆ ನಮಿಸಿದ್ದಾರೆ.

**ಶ್ರೀ ಸಿ. ನಂ. ಕೃಷ್ಣಮೂರ್ತಿ**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 200=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ (ಒಂದು ವರ್ಷಕ್ಕೆ) | ರೂ – 42=00 |
| ಶಾಶ್ವತ ನಿತ್ಯಾರ್ಚನೆ | ರೂ – 542=00 |

ಮುಂಗೋಳಿ ಕೂಗ್ಯಾವು ಮೂಡು
ಕೆಂಪೇರ್ಯಾವು
ನಾರಾಯಣ ಸ್ವಾಮಿ ರಥವೇರಿ
ಬರುವಾಗ
ನಾವೆದ್ದು ಕೈಯ ಮುಗಿದೇವು ||

ಮುತ್ತಿನ ಚಿಬ್ಬಲ ತಕ್ಕೊಳ್ಳಿ
ಬೆಳಗಾಯ್ತು
ಹೂವು ಚಾಜಿಗಳು ಅರಳ್ಯಾವೆ
ಮೂಡಲ ದಿಕ್ಕಿನ ವನದಲ್ಲಿ ||

ಸೂರ್ಯ, ಚಂದ್ರ, ಭೂಮಿ, ಆಕಾಶ, ನೀರು ಇವುಗಳೊಂದಿಗೆ ಮಣ್ಣಿನ ಮಕ್ಕಳಾದ ಗ್ರಾಮೀಣರು ನಿಕಟವಾದ ಸಂಬಂಧವನ್ನು ಹೊಂದಿದ್ದರು. ಅವರ ಪಾಲಿಗೆ ಅವೆಲ್ಲವೂ ಭಗವಂತನ ವಿವಿಧ ರೂಪಗಳೇ ಆಗಿದ್ದವು. ಆದ್ದರಿಂದಲೇ ಜನಪದ ಸಾಹಿತ್ಯ ಕವಯಿತ್ರಿ ಬೆಳಗಿನಲ್ಲಿ ವಸುಂಧರೆಯನ್ನೇ ನೆನೆಯುತ್ತಾಳೆ.

ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೋಳ
ಭೂಮಿತಾಯಿ
ಎದ್ದೊಂದು ಗಳಿಗೆ ನೆನೆದೇನು

ತನ್ನ ನಾಲಿಗೆಯ ಮೇಲೆ ನಾರಾಯಣನೆಂಬ ಬೀಜವನ್ನು ಬಿತ್ತಿ ಬೆಳೆಯಬೇಕೆಂದು ಆಕೆ ಬಯಸುತ್ತಾಳೆ.

ನಾರಾಯಣ ನಿನ್ನ ನಾಮದ ಬೀಜವನ್ನು
ನಾನೆಲ್ಲಿ ಬಿತ್ತಿ ಬೆಳೆಯಲಿ ನಿನನಾಮ
ನಾಲಿಗೆ ಮೇಲೆ ಬೆಳೆದೇನೊ

ಗೃಹಿಣಿಯಾದವಳು ತನ್ನ ನಿತ್ಯದ ಕೆಲಸಗಳನ್ನು ದೇವರ ಪ್ರಾರ್ಥನೆಯಿಂದಲೇ ಪ್ರಾರಂಭಿಸುತ್ತಾಳೆ.

ಶಿವ ಶಿವ ಎಂದರೆ ಸಿಡಿಲೆಲ್ಲ ಬಯಲಾಗಿ
ಕಲ್ಲು ಒಡೆದರಗಿ ಕಡೆಗಾಗಿ, ಎಲೆಮನವೆ
ಶಿವನೆಂಬ ಶಬುದ ಬಿಡಬ್ಯಾಡಾ

ಸ್ವಾರ್ಥಿಗಳಿಂದ ತುಂಬಿದ ಈ ಲೋಕದಲ್ಲಿ ಯಾರಿಂದಲೂ ನೆರವು ದೊರೆಯುವುದಿಲ್ಲ. ಯಾರು ನಮ್ಮ ದುಃಖವನ್ನು ಪರಿಹರಿಸುವುದಿಲ್ಲ. ಆದ್ದರಿಂದ ಗ್ರಾಮೀಣ ಹೆಣ್ಣು ಶಿವನನ್ನೇ ನಂಬಿ ಸ್ತುತಿಸುತ್ತಾಳೆ.

(32ನೇ ಪುಟ ನೋಡಿ)

ಧಾರಾವಾಹಿ

# ಭಾರತೀಯ ಪರಮಾರ್ಥ

# ಕರ್ಮ ವಿಚಾರ

ಶ್ರೀ ಎಂ.ಓ.ಎಸ್. ಅಯ್ಯಂಗಾರ್

ಕರ್ಮವೆಂದರೆ ಕಾರ್ಯವೆಂದು ಸ್ಥೂಲವಾದ ಅರ್ಥ. ಇದು ಮಾನವ ಜೀವಿತದಲ್ಲಿ ಎಷ್ಟುಮಟ್ಟಿಗೆ ಹೆಣೆದು ಕೊಂಡಿರುವುದೆಂಬುದನ್ನು ನೋಡಿದರೆ ಕರ್ಮವಿಲ್ಲದೆ ಒಂದು ನಿಮಿಷವೂ ಪ್ರಾಣಿಗಳು ಜೀವಿಸಿರಲಾರವು. ಗಡಿಯಾರದ ಮುಳ್ಳುಗಳಂತೆ ವೇಗವಾಗಿಯೋ ನಿಧಾನವಾಗಿಯೋ ಕಾರ್ಯಗಳು ನಡೆಯುತ್ತಲೇ ಇರುತ್ತವೆ. ಪ್ರಪಂಚದಲ್ಲಿರುವ ಸೂರ್ಯಚಂದ್ರರೂ ಸಮಸ್ತಗ್ರಹ ನಕ್ಷತ್ರಗಳೂ ಒಂದು ನಿಯತ ರೀತಿಯಲ್ಲಿ ಚಲಿಸುತ್ತಲೇ ಇರುತ್ತವೆ. ಮರಗಿಡಗಳು ಋತುಧರ್ಮವನ್ನನುಸರಿಸಿ ಬೆಳೆಯುತ್ತಲೇ ಇವೆ. ಪ್ರಾಣಿಗಳ ದೇಹದ ಬೆಳವಣಿಗೆ ವಿರಾಮವಿಲ್ಲದೆ ಜರುಗುತ್ತಲೇ ಇರುತ್ತದೆ.

"ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್" (ಭ ಗೀ. 3–5) ಎಂದರೆ ಮಾನವನು ಯಾವನೇ ಆಗಲಿ ಕಾರ್ಯವಿಲ್ಲದೆ ಒಂದು ಕ್ಷಣವೂ ಇರಲಾರನು; ಎಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿರುವನು. ಯಾವಕಾರ್ಯವನ್ನೂ ಮಾಡದೆ ಸುಮ್ಮನೆ ಕುಳಿತು ಕೊಂಡೋ ಮಲಗಿಕೊಂಡೋ ಇರುವಾಗಲೂ ಮನುಷ್ಯನು ಉಸಿರಾಡುತ್ತಲೇ ಇರುವನು. ದೇಹದೊಳಗಿರುವ ಇಂದ್ರಿಯಗಳು ಕಾರ್ಯಮಾಡುತ್ತಲೇ ಇರುತ್ತವೆ. ರಕ್ತ ಸಂಚಾರ ನಡೆಯುತ್ತಲೇ ಇರುತ್ತದೆ. ಅವುಗಳಿಗೆ ವಿರಾಮವೇ ಇಲ್ಲ. ಇದು ಪ್ರಾಣಿಕೋಟಿಗೆಲ್ಲಾ ಸಮಾನವಾದ ಧರ್ಮ. ಬ್ರಹ್ಮಾಂಡ ಪೂರ್ತಿವೂ ಒಂದು ಅದ್ಭುತವಾದ ಯಂತ್ರಾಗಾರದಂತೆ, ಅವಿಚ್ಛಿನ್ನವಾದ ಕಾರ್ಯಮಾಡುತ್ತಲೇ ಇರುತ್ತದೆ.

ಮಾನವನು ಮಾಡುವ ಕಾರ್ಯಗಳಿಗೆಲ್ಲಾ ಮನಸ್ಸಿನ ಪ್ರೇರಣೆಯಿರುತ್ತದೆ. ಮಾಡಬೇಕಾದ ಕಾರ್ಯವನ್ನು ಮನಸ್ಸು ಮೊದಲು ಯೋಚಿಸುತ್ತದೆ. ಅನಂತರ ಇಂದ್ರಿಯಗಳಿಂದ ಕಾರ್ಯಮಾಡಿಸುತ್ತದೆ. ಇಂಗ್ಲೀಷಿನಲ್ಲಿ Thought is action intended and action is thought extended ಎನ್ನುವರು. ಇದರ ಅರ್ಥ ಯೋಚನೆ ಕಾರ್ಯದ ಅಂತರ ರೂಪ; ಕಾರ್ಯವು ಯೋಚನೆಯ ಬಹಿರಂಗರೂಪ – ಎಂದು. ಆದರಿಂದ ಯೋಚನೆ ಕಾರ್ಯ ಇವೆರಡೂ ಜೊತೆಯಲ್ಲೇ ಕಾರ್ಯಮಾಡುತ್ತವೆ. ಒಂದು ಮನಸ್ಸಿನಲ್ಲಿ,ಮತ್ತೊಂದು ಇಂದ್ರಿಯಗಳ ಮೂಲಕ. ಪ್ರಪಂಚದಲ್ಲಿ ಮಾನವನ ಮತ್ತು ಇತರ ಜೀವಿಗಳ ಸೃಷ್ಟಿಯು ಅವರವರ ಪೂರ್ವಾರ್ಜಿತ ಕರ್ಮಗಳನನುಸರಿಸಿ ಪರಮಾತ್ಮನಿಂದ ಮಾಡಲ್ಪಡುತ್ತದೆಂಬುವುದು ಶಾಸ್ತ್ರಸಿದ್ಧವಾದ ವಿಷಯ. ಇಲ್ಲಿ ಮಾನವರ ವಿಚಾರಮಾತ್ರ ಮಾಡುಮಾತ್ರ ಮಾಡೋಣ.

## ವಿಚಿತ್ರಸೃಷ್ಟಿಗೆ ಕರ್ಮವೇ ಮೂಲ

ಪ್ರತಿಯೊಬ್ಬನೂ ತನ್ನ ಹಿಂದಿನ ಅನನ್ತಾನನ್ತ ಜನ್ಮಗಳಿಂದ ಮಾಡಿದ ಕರ್ಮಗಳ ಫಲವನ್ನು ಅನುಭವಿಸುವುದಕ್ಕಾಗಿ ಶರೀರವನ್ನು ಪಡೆದು ಭೂಮಿಯ ಮೇಲೆ ಹುಟ್ಟುವನು. ಈ ಸೃಷ್ಟಿಯಲ್ಲಿ ತೋರುವ ವ್ಯತ್ಯಾಸಗಳಿಗೆ ಕಾರಣವಾದ ಕರ್ಮ ತತ್ತ್ವವನ್ನು ಅರಿಯದವರಿಗೆ ಅರ್ಥವಾಗುವುದಿಲ್ಲ. ಕೆಲವರು ಮಹದೈಶ್ವರ್ಯ ಸಂಪನ್ನರಾದವರ ಮನೆಯಲ್ಲಿ ಹುಟ್ಟುವರು; ಕೆಲವರು ಕೇವಲ ದರಿದ್ರ ವಾತಾವರಣದಲ್ಲಿ ಹುಟ್ಟುವರು. ಕೆಲವರು ಬುದ್ಧಿವಂತರಾಗಿರುವರು, ಕೆಲವರು ದಡ್ಡರು, ಮತ್ತು ಅವರ ತಲೆಗೆ ವಿದ್ಯೆಯೇ ಹತ್ತುವುದಿಲ್ಲ. ಕೆಲವರು ಒಳ್ಳೆ ಗುಣಶಾಲಿಗಳಾಗಿ ಎಲ್ಲರಿಗೂ ಸಹಾಯಕರಾಗಿರುವರು; ಕೆಲವರು ಚಿಕ್ಕವಯಸ್ಸಿನಿಂದಲೇ ದುರ್ಬುದ್ಧಿಗಳಾಗಿದ್ದು ತಮ್ಮ ಜೀವಿತದಲ್ಲಿ ಇತರರಿಗೆ ಹಿಂಸೆಯನ್ನೇ ಕೊಡುತ್ತಿರುವರು. ಕೆಲವರು ಕಿವುಡರಾಗಿ, ಕುರುಡರಾಗಿ ಅಥವಾ ಹೆಳವರಾಗಿರುವರು.

ಈ ವ್ಯತ್ಯಾಸಗಳೇ ಅಲ್ಲದೆ ಮನುಷ್ಯರಲ್ಲಿರುವ ಸುಖದುಃಖಗಳಲ್ಲೂ ಬಹಳ ವ್ಯತ್ಯಾಸಗಳಿರುವುವು. ಐಶ್ವರ್ಯವಿದ್ದಾಕ್ಷಣ ಅವರು ಆರೋಗ್ಯದಿಂದಿದ್ದು ಸುಖಪಡುವರು ಎಂಬ ನಿರ್ಧಾರವಿರುವುದಿಲ್ಲ. ಅವರೂ ಐಶ್ವರ್ಯವು ಸುಖಕ್ಕೆ ಕಾರಣವಲ್ಲವೆಂಬ ಜ್ಞಾನ ಅವರಿಗೆ ಉಂಟಾಗದು. ಬಡವರಾಗಿರುವವರನೇಕರು ಆರೋಗ್ಯದಿಂದ್ದು ಸಂತೋಷದಿಂದಲೇ ಜೀವನವನ್ನು ಜರುಗಿಸುವರು. ಕೆಲವರು ತಮ್ಮ ಜೀವಿತವನ್ನೆಲ್ಲಾ ಕಷ್ಟದಿಂದಲೇ ಕಳೆಯುವರು.

ಈ ವಿಧವಾದ ವ್ಯತ್ಯಾಸಗಳಿಗೆ ಕಾರಣವೇನು? ಎಂಬ ಪ್ರಶ್ನೆಯೇಳುವುದು. ಪರಮಾತ್ಮನು ತನ್ನ ಸೃಷ್ಟಿಯಲ್ಲಿ ಈ ವಿವಾದ ವ್ಯತ್ಯಾಸಗಳನ್ನು ಮಾಡುವುದಕ್ಕೆ ಕಾರಣವೇನು? ಅವನಲ್ಲಿ ವೈಷಮ್ಯವಾಗಲಿ ನಿರ್ದಯತ್ವವಾಗಲಿ ಇದೆಯೋ? ಶಾಸ್ತ್ರರೀತಿಯಾಗಿ ಅವನಲ್ಲಿ ವೈಷಮ್ಯ ನಿರ್ದಯತ್ವಾದಿಗಳಿಲ್ಲ. ಅವನು ಕರುಣಾಳು; ಸರ್ವ ಮಾನಸನು. ನ್ಯಾಯಾಧೀಶಸ್ಥಾನದಲ್ಲಿದ್ದು ಅವರವರ ಕರ್ಮಗಳಿಗನುಗುಣವಾಗಿ ಅವರಿಗೆ ಮುಂದಿನ ಜನ್ಮಗಳಲ್ಲಿ ಫಲಾನುಭವಗಳನ್ನುಂಟು ಮಾಡಬೇಕು. ಸೃಷ್ಟಿಯಲ್ಲಿ ಈ ನಿಯಮವನ್ನು ಅವನೇ ಶಾಸ್ತ್ರಗಳಮೂಲಕ ಘೋಷಿಸಿ ಕೈಕೊಂಡಿರುವನು. ತನ್ನ ನಿಯಮವನ್ನೇ ತಾನೇ ಉಲ್ಲಂಘಿಸಲಾರನು. ಆತನ ನಿಯಮನ ಪ್ರಕಾರ ನಡೆಯದಿದ್ದರೇನೇ ಪರಮಾತ್ಮನಲ್ಲಿ ವೈಷಮ್ಯಾದಿ ದೋಷಗಳನ್ನು ಆರೋಪಿಸಬೇಕಾಗುವುದು. ಲೋಕದ ಜನರೆಲ್ಲರೂ ತನ್ನ ಮಕ್ಕಳೇ. ಒಳ್ಳೆ ಮಕ್ಕಳನ್ನು ಮತ್ತಷ್ಟು ಪ್ರೋತ್ಸಾಹಿಸಿ ಇನ್ನೂ ಒಳ್ಳೆಯವರನ್ನಾಗಿ ಮಾಡಬೇಕು. ಕೆಟ್ಟ ಮಕ್ಕಳನ್ನು ಆಗಾಗ ಸ್ವಲ್ಪ ಶಿಕ್ಷಿಸಿ ಕೆಟ್ಟ ಕಾರ್ಯಗಳಿಂದ ಅವರನ್ನು ತಪ್ಪಿಸಬೇಕು.

## ವರ್ಣಾಶ್ರಮ ಧರ್ಮಗಳು

ಈ ಸಂದರ್ಭದಲ್ಲಿ ಸೃಷ್ಟಿಯ ಆಡಳಿತದ ವಿಷಯವಾಗಿ ಸ್ವಲ್ಪ ಹೇಳಬೇಕಾಗುವುದು. ಲೌಕಿಕ ಸರ್ಕಾರದ ಆಡಳಿತದಲ್ಲಿ ಅನೇಕ ನಿಯಮಗಳನ್ನಿಟ್ಟುಕೊಂಡು ಕಾರ್ಯಮಾಡುವರು. ಆ ನಿಯಮಗಳು ಬಡವರು ಐಶ್ವರ್ಯವಂತರು ಎಲ್ಲರಿಗೂ ಒಂದೇ ಸಮನಾಗಿ ಅನ್ವಯಿಸುವುದು. ಆ ನಿಯಮಗಳನ್ನು ಉಲ್ಲಂಘಿಸಿದವರನ್ನು ಸುಮ್ಮನೆ ಬಿಟ್ಟರೆ ಅದರಿಂದ ಇನ್ನೂ ಹೆಚ್ಚು ಜನರು ನಿಯಮವನ್ನುಲ್ಲಂಘಿಸುವುದಕ್ಕೆ ಧೈರ್ಯ ಕೊಟ್ಟಂತಾಗುವುದು. ನ್ಯಾಯಧರ್ಮಗಳನ್ನು ಪಾಲಿಸಬೇಕಾದರೆ ದುಷ್ಟರನ್ನು ಶಿಕ್ಷಿಸಲೇಬೇಕು. ಅದಕ್ಕಾಗಿಯೇ ನ್ಯಾಯಶಾಸ್ತ್ರಗಳು (Law codes), ಕೋರ್ಟುಗಳು (Courts); ಪೋಲೀಸು, ಜೈಲು ಇತ್ಯಾದಿಗಳಿರುವುವು. ಪರಮಾತ್ಮನು ತನ್ನ ಇತರ ಕಾರ್ಯ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಗಳ ಜೊತೆಗೆ ಒಳ್ಳೆ ನ್ಯಾಯಾಧೀಶನಾಗಿಯೂ ಇರುವನು.

ಪರಮಾತ್ಮನು ಈ ವಿಧವಾದ ನ್ಯಾಯಶಾಸ್ತ್ರಗಳನ್ನೂ ಮತ್ತಿತರ ಶಾಸನಗಳನ್ನೂ ಮಾಡಿಟ್ಟು ವನೇ? ಎಂದು ಪ್ರಶ್ನಿಸುವರಿರುವರು. ಅವೆಲ್ಲವೂ ಬೇಕಾದಷ್ಟಿವೆ. ಆದರೆ ಈಗಿನ ಕಾಲದಲ್ಲಿ ಅವನ್ನು ಯಾರೂ ಸರಿಯಾಗಿ ಗಮನಿಸುತ್ತಿಲ್ಲ. ವೇದಾನ್ತಾದಿ ಶಾಸ್ತ್ರಗಳು, ಧರ್ಮಶಾಸ್ತ್ರಗಳು, ನೀತಿಶಾಸ್ತ್ರಗಳು, ಸನಾತನಧರ್ಮಗಳನ್ನು ಬೋಧಿಸುವ ಶಾಸ್ತ್ರಗಳು, ವರ್ಣಾಶ್ರಮ ಧರ್ಮಗಳನ್ನು ಹೇಗೆ ಆಚರಿಸಬೇಕು ಎಂಬ ನಿಯಮಗಳನ್ನೊಳಕೊಂಡ ಶಾಸ್ತ್ರಗಳು, ಇತಿಹಾಸ ಪುರಾಣಗಳು –ಇವೆಲ್ಲವೂ ಮಾನವನು ಆವಶ್ಯಕವಾಗಿ ಅನುಸರಿಸಬೇಕಾದ ನೀತಿನಿಯಮಗಳ ವರ್ಣನೆಗಳಿಂದ ತುಂಬಿ ತುಳುಕುತ್ತಿರುವುವು. ಇತಿಹಾಸಪುರಾಣಗಳಲ್ಲಿ ಆ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸಿದವರಿಗೆ ಉತ್ತೇಜನವೂ ಅವುಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆಯನ್ನು ವಿಧಿಸಿದ ಉದಾಹರಣೆಗಳೂ ತುಂಬಿವೆ. ಆದರೆ ಆ ಗ್ರಂಥಗಳನ್ನೆಲ್ಲಾ ಈಗ ಮೂಲೆಗೆಸೆದು ಅವುಗಳನ್ನು ಮರೆಯುತ್ತಿರುವರೇ ವಿನಾ ಉಪಯೋಗಿಸಿಕೊಳ್ಳುತ್ತಿಲ್ಲ. ಕೃತತ್ರೇತಾಯುಗಗಳಲ್ಲಿ ದೇಶಗಳನ್ನು ಪಾಲಿಸುತ್ತಿದ್ದ ರಾಜರು ಈ ಶಾಸ್ತ್ರಗಳನ್ನನುಸರಿಸಿಯೇ ತಮ್ಮ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದರೆಂಬುವುದಕ್ಕೆ ಇತಿಹಾಸ ಪುರಾಣಗಳಲ್ಲಿ ಅನೇಕ ಉದಾಹರಣೆಗಳಿವೆ. ಆ ಕಾಲದ ರಾಜರುಗಳಲ್ಲಿ ಆಗಾಗ್ಗೆ ಋಷಿಗಳನ್ನೂ ಪಂಡಿತರನ್ನೂ ಸಭೆ ಸೇರಿಸಿ ತತ್ತ್ವವಿಚಾರಗಳು ರಾಜನೀತಿ, ಇತ್ಯಾದಿ ರಾಜ್ಯಾಡಳಿತಕ್ಕೆ ಅವಶ್ಯಕವಾದ ವಿಷಯಗಳನ್ನೂ ಚರ್ಚಿಸುವ ಪದ್ಧತಿಯಿತ್ತು. ಈಗ ಕಲಿಯುಗದ ಮಹಾತ್ಮೆಯಿಂದಲೋ ಏನೋ ಅವುಗಳನ್ನು ಯಾರೂ ಗಮನಿಸುತ್ತಿಲ್ಲ, ಈ ಹಳೇನಿಯಮಗಳು ಸರಿಯಾಗಿಲ್ಲ, ಈಗಿನ ಪಾಶ್ಚಾತ್ಯ ನಿಯಮಗಳಿಗನುಸಾರವಾಗಿ ಅವುಗಳನ್ನು ಬದಲಾಯಿಸಬೇಕು ಎಂಬ ವಾದಗಳು ಹುಟ್ಟಿಕೊಂಡಿವೆ.

ಸನಾತನ ಧರ್ಮವನ್ನು ಬೋಧಿಸುವ ಶಾಸ್ತ್ರಗಳಲ್ಲಿ ಲೋಕಜೀವನವು ಶಾಂತಿಯಿಂದಲೂ ಧರ್ಮಯುತವಾಗಿಯೂ ಇರಬೇಕೆಂದೂ, ಜನರಲ್ಲಿರುವ ಜಾತಿಮತಗಳ ಭೇದಗಳನ್ನು ಗಮನಿಸದಂತೆ ಸ್ನೇಹಸೌಹಾರ್ದಗಳು ಏರ್ಪಡುವುದಕ್ಕಾಗಿಯೂ, ಅವರಲ್ಲಿ ಜ್ಞಾನಭಕ್ತಿಗಳು ಅಭಿವೃದ್ಧಿಯಾಗಿ ಅವರು ಸಂಸಾರದಿಂದ ಉತ್ತೀರ್ಣರಾಗಬೇಕೆಂಬ ಅಭಿಪ್ರಾಯದಿಂದಲೂ ಅನೇಕ ಧರ್ಮಗಳು ಉಪದೇಶಿಸಲ್ಪಟ್ಟಿರುವುವು. ಈ ಸನಾತನ ಧರ್ಮಗಳನ್ನು ಮೂರು ವಿಭಾಗವಾಗಿ ವಿಂಗಡಿಸಬಹುದು. (1) ಜಾತಿಮತಗಳ ಭೇದಗಳನ್ನು

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಗಳ ಜೊತೆಗೆ ಒಳ್ಳೆ ನ್ಯಾಯಾಧೀಶನಾಗಿಯೂ ಇರುವನು.

ಪರಮಾತ್ಮನು ಈ ವಿಧವಾದ ನ್ಯಾಯಶಾಸ್ತ್ರಗಳನ್ನೂ ನೀತಿತರ ಶಾಸನಗಳನ್ನೂ ಮಾಡಿರುವನೇ? ಎಂದು ಪ್ರಶ್ನಿಸುವರಿರುವರು. ಅವೆಲ್ಲವೂ ಬೇಕಾದಷ್ಟಿವೆ. ಆದರೆ ಈಗಿನ ಕಾಲದಲ್ಲಿ ಅವನ್ನು ಯಾರೂ ಸರಿಯಾಗಿ ಗಮನಿಸುತ್ತಿಲ್ಲ. ವೇದಾನ್ತಾದಿ ಶಾಸ್ತ್ರಗಳು, ಧರ್ಮಶಾಸ್ತ್ರಗಳು, ನೀತಿಶಾಸ್ತ್ರಗಳು, ಸನಾತನಧರ್ಮಗಳನ್ನು ಬೋಧಿಸುವ ಶಾಸ್ತ್ರಗಳು, ವರ್ಣಾಶ್ರಮ ಧರ್ಮಗಳನ್ನು ಹೇಗೆ ಆಚರಿಸಬೇಕು ಎಂಬ ನಿಯಮಗಳನ್ನೊಳಕೊಂಡ ಶಾಸ್ತ್ರಗಳು, ಇತಿಹಾಸ ಪುರಾಣಗಳು –ಇವೆಲ್ಲವೂ ಮಾನವನು ಅವಶ್ಯಕವಾಗಿ ಅನುಸರಿಸಬೇಕಾದ ನೀತಿನಿಯಮಗಳ ವರ್ಣನೆಗಳಿಂದ ತುಂಬಿ ತುಳುಕುತ್ತಿರುವುವು. ಇತಿಹಾಸಪುರಾಣಗಳಲ್ಲಿ ಆ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸಿದವರಿಗೆ ಉತ್ತೇಜನವೂ ಅವುಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆಯನ್ನು ವಿಧಿಸಿದ ಉದಾಹರಣೆಗಳೂ ತುಂಬಿವೆ. ಆದರೆ ಆ ಗ್ರಂಥಗಳನ್ನೆಲ್ಲಾ ಈಗ ಮೂಲೆಗೆಸೆದು ಅವುಗಳನ್ನು ಮರೆಯುತ್ತಿರುವೆವೇ ವಿನಾ ಉಪಯೋಗಿಸಿಕೊಳ್ಳುತ್ತಿಲ್ಲ. ಕೃತತ್ರೇತಾಯುಗಗಳಲ್ಲಿ ದೇಶಗಳನ್ನು ಪಾಲಿಸುತ್ತಿದ್ದ ರಾಜರು ಈ ಶಾಸ್ತ್ರಗಳನ್ನನುಸರಿಸಿಯೇ ತಮ್ಮ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದರೆಂಬುವುದಕ್ಕೆ ಇತಿಹಾಸ ಪುರಾಣಗಳಲ್ಲಿ ಅನೇಕ ಉದಾಹರಣೆಗಳಿವೆ. ಆ ಕಾಲದ ರಾಜರುಗಳಲ್ಲಿ ಆಗಾಗ್ಗೆ ಋಷಿಗಳನ್ನೂ ಪಂಡಿತರನ್ನೂ ಸಭೆ ಸೇರಿಸಿ ತತ್ತ್ವವಿಚಾರಗಳು ರಾಜನೀತಿ, ಇತ್ಯಾದಿ ರಾಜ್ಯಾಡಳಿತಕ್ಕೆ ಅವಶ್ಯಕವಾದ ವಿಷಯಗಳನ್ನೂ ಚರ್ಚಿಸುವ ಪದ್ಧತಿಯಿತ್ತು. ಈಗ ಕಲಿಯುಗದ ಮಹಾತ್ಮೆಯಿಂದಲೋ ಏನೋ ಅವುಗಳನ್ನು ಯಾರೂ ಗಮನಿಸುತ್ತಿಲ್ಲ, ಈ ಹಳೇನಿಯಮಗಳು ಸರಿಯಾಗಿಲ್ಲ, ಈಗಿನ ಪಾಶ್ಚಾತ್ಯ ನಿಯಮಗಳಿಗನುಸಾರವಾಗಿ ಅವುಗಳನ್ನು ಬದಲಾಯಿಸಬೇಕು ಎಂಬ ವಾದಗಳು ಹುಟ್ಟಿಕೊಂಡಿವೆ.

ಸನಾತನ ಧರ್ಮವನ್ನು ಬೋಧಿಸುವ ಶಾಸ್ತ್ರಗಳಲ್ಲಿ ಲೋಕಜೀವನವು ಶಾಂತಿಯಿಂದಲೂ ಧರ್ಮಯುತವಾಗಿಯೂ ಇರಬೇಕೆಂದೂ, ಜನರಲ್ಲಿರುವ ಜಾತಿಮತಗಳ ಭೇದಗಳನ್ನು ಗಮನಿಸದಂತೆ ಸ್ನೇಹಸೌಹಾರ್ದಗಳು ಏರ್ಪಡುವುದಕ್ಕಾಗಿಯೂ, ಅವರಲ್ಲಿ ಜ್ಞಾನಭಕ್ತಿಗಳು ಅಭಿವೃದ್ಧಿಯಾಗಿ ಅವರು ಸಂಸಾರದಿಂದ ಉತ್ತೀರ್ಣರಾಗಬೇಕೆಂಬ ಅಭಿಪ್ರಾಯದಿಂದಲೂ ಅನೇಕ ಧರ್ಮಗಳು ಉಪದೇಶಿಸಲ್ಪಟ್ಟಿರುವುವು. ಈ ಸನಾತನ ಧರ್ಮಗಳನ್ನು ಮೂರು ವಿಭಾಗವಾಗಿ ವಿಂಗಡಿಸಬಹುದು. (1) ಜಾತಿಮತಗಳ ಭೇದಗಳನ್ನು

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

### ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಗಳ ಜೊತೆಗೆ ಒಳ್ಳೆ ನ್ಯಾಯಾಧೀಶನಾಗಿಯೂ ಇರುವನು.

ಪರಮಾತ್ಮನು ಈ ವಿಧವಾದ ನ್ಯಾಯಶಾಸ್ತ್ರಗಳನ್ನೂ ಇತ್ಯಾದಿ ಶಾಸನಗಳನ್ನೂ ಮಾಡಿರುವನೇ? ಎಂದು ಪ್ರಶ್ನಿಸುವರಿರುವರು. ಅವೆಲ್ಲವೂ ಬೇಕಾದಷ್ಟಿವೆ. ಆದರೆ ಈಗಿನ ಕಾಲದಲ್ಲಿ ಅವನ್ನು ಯಾರೂ ಸರಿಯಾಗಿ ಗಮನಿಸುತ್ತಿಲ್ಲ. ವೇದಾಂತಾದಿ ಶಾಸ್ತ್ರಗಳು, ಧರ್ಮಶಾಸ್ತ್ರಗಳು, ನೀತಿಶಾಸ್ತ್ರಗಳು, ಸನಾತನಧರ್ಮಗಳನ್ನು ಬೋಧಿಸುವ ಶಾಸ್ತ್ರಗಳು, ವರ್ಣಾಶ್ರಮ ಧರ್ಮಗಳನ್ನು ಹೇಗೆ ಆಚರಿಸಬೇಕು ಎಂಬ ನಿಯಮಗಳನ್ನೊಳಕೊಂಡ ಶಾಸ್ತ್ರಗಳು, ಇತಿಹಾಸ ಪುರಾಣಗಳು –ಇವೆಲ್ಲವೂ ಮಾನವನು ಅವಶ್ಯಕವಾಗಿ ಅನುಸರಿಸಬೇಕಾದ ನೀತಿನಿಯಮಗಳ ವರ್ಣನೆಗಳಿಂದ ತುಂಬಿ ತುಳುಕುತ್ತಿರುವುವು. ಇತಿಹಾಸಪುರಾಣಗಳಲ್ಲಿ ಆ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸಿದವರಿಗೆ ಉತ್ತೇಜನವೂ ಅವುಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆಯನ್ನು ವಿಧಿಸಿದ ಉದಾಹರಣೆಗಳೂ ತುಂಬಿವೆ. ಆದರೆ ಆ ಗ್ರಂಥಗಳನ್ನೆಲ್ಲಾ ಈಗ ಮೂಲೆಗೆಸೆದು ಅವುಗಳನ್ನು ಮರೆಯುತ್ತಿರುವೆವೇ ವಿನಾ ಉಪಯೋಗಿಸಿಕೊಳ್ಳುತ್ತಿಲ್ಲ. ಕೃತತ್ರೇತಾಯುಗಗಳಲ್ಲಿ ದೇಶಗಳನ್ನು ಪಾಲಿಸುತ್ತಿದ್ದ ರಾಜರು ಈ ಶಾಸ್ತ್ರಗಳನ್ನನುಸರಿಸಿಯೇ ತಮ್ಮ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದರೆಂಬುವುದಕ್ಕೆ ಇತಿಹಾಸ ಪುರಾಣಗಳಲ್ಲಿ ಅನೇಕ ಉದಾಹರಣೆಗಳಿವೆ. ಆ ಕಾಲದ ರಾಜರುಗಳಲ್ಲಿ ಆಗಾಗ್ಗೆ ಋಷಿಗಳನ್ನೂ ಪಂಡಿತರನ್ನೂ ಸಭೆ ಸೇರಿಸಿ ತತ್ತ್ವವಿಚಾರಗಳು ರಾಜನೀತಿ, ಇತ್ಯಾದಿ ರಾಜ್ಯಾಡಳಿತಕ್ಕೆ ಅವಶ್ಯಕವಾದ ವಿಷಯಗಳನ್ನೂ ಚರ್ಚಿಸುವ ಪದ್ಧತಿಯಿತ್ತು. ಈಗ ಕಲಿಯುಗದ ಮಹಾತ್ಮೆಯಿಂದಲೋ ಏನೋ ಅವುಗಳನ್ನು ಯಾರೂ ಗಮನಿಸುತ್ತಿಲ್ಲ, ಈ ಹಳೇನಿಯಮಗಳು ಸರಿಯಾಗಿಲ್ಲ, ಈಗಿನ ಪಾಶ್ಚಾತ್ಯ ನಿಯಮಗಳಿಗನುಸಾರವಾಗಿ ಅವುಗಳನ್ನು ಬದಲಾಯಿಸಬೇಕು ಎಂಬ ವಾದಗಳು ಹುಟ್ಟಿಕೊಂಡಿವೆ.

ಸನಾತನ ಧರ್ಮವನ್ನು ಬೋಧಿಸುವ ಶಾಸ್ತ್ರಗಳಲ್ಲಿ ಲೋಕಜೀವನವು ಶಾಂತಿಯಿಂದಲೂ ಧರ್ಮಯುತವಾಗಿಯೂ ಇರಬೇಕೆಂದೂ, ಜನರಲ್ಲಿರುವ ಜಾತಿಮತಗಳ ಭೇದಗಳನ್ನು ಗಮನಿಸದಂತೆ ಸ್ನೇಹಸೌಹಾರ್ದಗಳು ಏರ್ಪಡುವುದಕ್ಕಾಗಿಯೂ, ಅವರಲ್ಲಿ ಜ್ಞಾನಭಕ್ತಿಗಳು ಅಭಿವೃದ್ಧಿಯಾಗಿ ಅವರು ಸಂಸಾರದಿಂದ ಉತ್ತೀರ್ಣರಾಗಬೇಕೆಂಬ ಅಭಿಪ್ರಾಯದಿಂದಲೂ ಅನೇಕ ಧರ್ಮಗಳು ಉಪದೇಶಿಸಲ್ಪಟ್ಟಿರುವುವು. ಈ ಸನಾತನ ಧರ್ಮಗಳನ್ನು ಮೂರು ವಿಭಾಗವಾಗಿ ವಿಂಗಡಿಸಬಹುದು. (1) ಜಾತಿಮತಗಳ ಭೇದಗಳನ್ನು

ಗೃಹಲಕ್ಷ್ಮಿ

# ಕುಬ್ಜಾಂಗನಾ

**ಶ್ರೀಮತಿ ಎ. ಎಸ್. ಪಂಕಜ**

ಅನುರಾಗದ ಒಂದು ವಿಶಿಷ್ಟ ರೂಪವಾದ ಭಕ್ತಿಯದು. ಕಾಣಲು ಸರಳವೆಂದು ತೋರಬಹುದಾದರೂ, ಸಂಕೀರ್ಣವಾದ ಸ್ವರೂಪ. ಇಹದ ಬಂಧ-ಸಂಬಂಧಗಳಿಂದ ತನ್ನನ್ನು ತಾನು ಬಿಡಿಸಿಕೊಳ್ಳುವ, ಅದಕ್ಕಾಗಿ ಪರದ ಕುರಿತು ಚಿಂತಿಸಿ ಪರಮಾತ್ಮನಿಗೆ ಶರಣು ಹೋಗುವ, ತನ್ಮೂಲಕ ಬದುಕಿನ ವಿಷಮತೆ ವಿಷಾದಗಳನ್ನು ಒದ್ದು-ಗೆದ್ದು ಜೀವನದ ಜಟಿಲತಾ ಪರಿಹಾರವನ್ನು ಕಂಡುಕೊಳ್ಳುವ ಹಾಗೂ ಆತ್ಮೋದ್ಧಾರವನ್ನು ಮಾಡಿಕೊಳ್ಳುವ ಒಂದು ದೊಡ್ಡದಾರಿ ಅದು; ಕತ್ತಲೆಯಿಂದ ಬೆಳಕಿಗೆ ಕೊಂಡೊಯ್ಯುವ ದೊಡ್ಡ ದೀಪವೂ ಅಹುದು. ಇಂಥ ವಿಲಕ್ಷಣ ಭಕ್ತಿಯ ವಿಶೇಷ ಪರಿಮಳ ತುಂಬಿ ತುಳುಕುವ ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರ ಕಥನ ಕವನಗಳಲ್ಲಿ ಕುಬ್ಜಾಂಗನಾ ಒಂದಾಗಿದೆ.

ಪತಿತೋದ್ಧಾರಕ ಪರಮಾತ್ಮ ಶ್ರೀಕೃಷ್ಣನ ಭಕ್ತಳು ಕುಬ್ಜಾಂಗನೆ ಇವಳು ಮೊದಲು ಯಾದವರ ಅರಸನಾದ ಕಂಸನ ದಾಸಿ. ಪ್ರತಿದಿನವೂ ಪರಿಮಳ ಭರಿತವಾದ ಚಂದನವನ್ನು ಕಂಸನಿಗೆ ತಂದುಕೊಡುವ ಕೆಲಸ ಆಕೆಯದಾಗಿದ್ದಿತು. ಕೃಷ್ಣ ಬಲರಾಮರು ಕಂಸನ ಅಪ್ಪಣೆಯಂತೆ ಮಥುರೆಗೆ ಬಂದು ಮುಷ್ಟಿಕ, ಚಾಣೂರರೆಂಬ ಜಟ್ಟಿಗಳೊಡನೆ ಕಾಳಗಕ್ಕೆ ಹೊರಟಾಗ, ನಡುದಾರಿಯಲ್ಲಿ ಈ ಕುಬ್ಜೆ ಕಂಡು, ತಾನು ಕಂಸನಿಗೆಂದು ಕೊಂಡೊಯ್ಯುತ್ತಿದ್ದ ಚಂದನವನ್ನು ಕೃಷ್ಣಪರಮಾತ್ಮನಿಗೆ ಅರ್ಪಿಸಿ, ತನ್ನ ವಕ್ರತೆಯನ್ನು ಕಳೆದುಕೊಂಡು ದಿವ್ಯ ಸೌಂದರ್ಯ ಭರಿತೆಯಾದ ಪ್ರಸಂಗವನ್ನು ಎಕ್ಕುಂಡಿಯವರು ಹೃದಯ ಸ್ಪರ್ಶಿ ಆಗುವಂತೆ ವರ್ಣಿಸಿ ಬರೆದಿದ್ದಾರೆ.

ಭಗವದ್ಭಕ್ತ ಅಕ್ರೂರನ ರಥದಿಂದ ಇಳಿದು ಮಥುರೆಯ ಪಥವನ್ನು ತುಳಿಯುತ್ತ ಬಲರಾಮ ಕೃಷ್ಣರು ಬರುತ್ತಿದ್ದಾರೆ. ಸುವರ್ಣದ ರತ್ನಾಂಬರವುಟ್ಟು ಚಿನ್ನದ ಮುಕುಟ ತಲೆಗಿಟ್ಟು, ದಿಟ್ಟನುತ್ತ ಬಲರಾಮ ಜೊತೆಗಿದ್ದಾನೆ.

ಕೋಟಿ ಚಂದ್ರಮರ ಕೋಮಲ
ಶೀತಲ ಕಳೆಯಂತೆ
ಚೆಲುವಿನ ಚೆಲುವೇ ಮೈತಳೆದಂತೆ
ಅರಿಷಿಣ ಮಂಗಲ ವಸನವನುಟ್ಟು
ನವಿಲು ತುರಾಯಿ ಕಿರೀಟವನಿಟ್ಟು
ಕಮಲಪದ ಕಮಲಾಕ್ಷ ಶ್ರೀಧರ
ಸಂಕರ್ಷಣ ಶ್ರೀಹರಿ ಮುರಲೀಧರ

ಮೇಘಶ್ಯಾಮನಾದ ಶ್ರೀಕೃಷ್ಣನು ಆಗಮಿಸುತ್ತಿದ್ದಾನೆ. ಅವರಿಬ್ಬರನ್ನೂ ಅದರಲ್ಲೂ ವಿಶೇಷವಾಗಿ ಶ್ರೀಕೃಷ್ಣನನ್ನು ನಗರಕ್ಕೆ ನಗರವೇ ಸಾಲಂಕೃತವಾಗಿ ಸ್ವಾಗತಿಸುತ್ತಿದೆ. ನಾಗರಿಕರೆಲ್ಲರ ಹೃದಯಗಳು ಅರಳಿ, ಶ್ರೀಕೃಷ್ಣನಿಗೆ ತಲೆ ಬಾಗುತ್ತಿವೆ "ಓಂ ನಮೋ ಭಗವತೇ ವಾಸುದೇವಾಯ" ಎಂದು ಕೈ ಜೋಡಿಸಿ, ತಮ್ಮ ಭಕ್ತಿಯನ್ನು ಪ್ರಕಟಿಸುವುದ ಜೊತೆಗೆ, ತಮ್ಮ ಮೇಲೆ ನಡೆಯುತ್ತಿದ್ದ ಕಂಸನ ದಬ್ಬಾಳಿಕೆಯನ್ನು ನರಳಿಕೆಯ ದನಿಯಲ್ಲಿ ಸೂಚಿಸುತ್ತಿವೆ! ಶ್ರೀಕೃಷ್ಣ ಅದನ್ನು ಬಲರಾಮನ ಗಮನಕ್ಕೆ ತರುತ್ತಾನೆ; ರಾಕ್ಷಸರಾಜನಾದ ಕಂಸನ ಅಧಿಕಾರದ ದರ್ಪದ ಭಯಂಕರ ವಿಷಸರ್ಪ ಪೂತ್ಕರಿಸಿ ಹೆಡೆಯಪ್ಪಳಿಸುತ್ತದೆ. ಎಂದು ಅರುಹುತ್ತಾನೆ! ಅದೇ ಸಮಯಕ್ಕೆ ಆತನಿಗೆ ತಾನು ಕಾಳಿಂದಿಯ ಮಡುವಿನಲ್ಲಿ ಮಾಡಿದ ಕಾಳಿಂಗ ಮರ್ದನದ ನೆನಪಾಗುತ್ತದೆ! ತನ್ನಿಂದ ಮುಂದಾಗುವ ಕಂಸಮರ್ದನದ ಮುನ್ ಸೂಚನೆಯಂತೆ.

ಅಷ್ಟರಲ್ಲಿ ಬೀದಿಯ ನಡುವೆ, ಪಾಟಲ ವರ್ಣದ ಸೀರೆಯುಟ್ಟು, ಗಿಳಿ ಹಸಿರು



ಬಣ್ಣದ ಮೇಲುದ ತೊಟ್ಟು, ಕೈಯಲ್ಲಿ ಶ್ರೀಗಂಧದ ಹೊಂಬಟ್ಟಲು ಹಿಡಿದುಕೊಂಡು ಸೈರಂಧ್ರಿ, ಕಂಸನ ಅಂತಃಪುರದ ದಾಸಿ ಬರುತ್ತಾಳೆ. ಆಕೆ ಜನ್ಮಾಂತರದ ವಿಧಿಯ ವಿಕಾರಗಳಿಂದ, ಮಣಿದ ಕುಬ್ಜಾಂಗನೆಯಾಗಿದ್ದಾಳೆ! ಜೀವದ ತಾಪವನ್ನು ಹೊರಲಾರದೆ ಹೊತ್ತಂತೆ ಬೆನ್ನು ಬಾಗಿದೆ, ರೂಪ ತ್ರಿವಕ್ರವಾಗಿದೆ!

ಮುಕುಂದನನ್ನು ಕಂಡು ಆನಂದ ತುಂದಿಲಳಾಗಿ ನಿಟ್ಟಿಸಿ ನೋಡುತ್ತ ನಿಂತಲ್ಲಿ ನಿಲ್ಲುತ್ತಾಳೆ—

ಪ್ರಕೃತಿ ದಿಗ್ಬಂಧನಗಳ ಮರೆಗೆ
ಪಲ್ಲಟಿಸುವ ಸುಖದುಃಖದ ತೆರೆಗೆ
ದೈವದ ದಾರುಣ ಸೆರೆಗೆ
ಕಳವಳಿಸುವ ಮಾನವ
ಜೀವನದಾಕ್ರಂದನದಂತೆ

ಮಾನವ ಜೀವನದ ಆಕ್ರಂದನವೇ—ಅಳುವೇ—ಮೈವೆತ್ತು ಬಂದಂತೆ, ಆಕೆ ಒಂದು ಕ್ಷಣ ಕಂಡುಬರುತ್ತಾಳೆ. ಮೂಕ ವೇದನೆಗೆ ಮಹಾಪೂರ ಬಂದಂತೆ ದಳ ದಳ ಬಳ ಕಣ್ಣೀರು ಧಾರಾಕಾರವಾಗಿ ಸುರಿಸುತ್ತಾಳೆ. ಭಗವಂತನ ಮನ ಕರಗುತ್ತದೆ. ದೀನಾಕ್ಷಿ

ಯಾದ ಕುಬ್ಜೆಯು ಕಂಬನಿಧಾರೆ, ಪತಿತೋದ್ಧಾರಕ ಪರಮಾತ್ಮನ ಚರಣಾರ್ಪಿತವಾಗಿ, ಬಿಡುಗಡೆಗಾಗಿ ಮೊರೆಯಿಡುತ್ತದೆ. "ಓಂ ನಮೋ ಭಗವತೇ ವಾಸುದೇವಾಯ", ಕರುಣಾಕರನಾದ ಶ್ರೀಕೃಷ್ಣ ಅನುಕಂಪಗೊಂಡು ಕೇಳುತ್ತಾನೆ;

ಹೇ ದೀನಾಕ್ಷಿಯೆ ಚಂದನ ಕನ್ನೆಯೆ
ನೀನಾರೆಲ್ಲಿಗೆ ನಡೆದಿರುವೆ?
ಶ್ರೀಗಂಧದ ಹೊಂಬಟ್ಟಲು ಕೈಯಲಿ ನೀ
ನೇತಕೆ ಹಿಡಿದಿರುವೆ?

ಅದಕ್ಕೆ ಚಂದ್ರಮುಖಿಯಾದ ಆ ಸೈರಂಧ್ರಿ ನುಡಿಯುತ್ತಾಳೆ;

ಕುಬ್ಜಾಂಗನೆ ನಾ ಕಂಸನ ಚಂದನ
ದೂಳಿಗದೊಳಗಿಹೆನು''

–ಹೀಗೆ ತನ್ನ ಪರಿಚಯ ಮಾಡಿಕೊಟ್ಟು, ಅನಂತರ ಹೇಳುತ್ತಾಳೆ;

ವಿಷಮಡವಾಗ್ನಿಯು ಪೈತ್ಯ ಶರೀರಕೆ
ಚಂದನ ಲೇಪದ ಫಲವೇನು?

ರಾಕ್ಷಸನಾದ ಕಂಸನ ಶರೀರದಲ್ಲೆಲ್ಲ ವಿಷಮಯವಾದ ಬಡಬಾಗ್ನಿಯೇ ತುಂಬಿರುವಾಗ, ಅದಕ್ಕೆ ಈ ಚಂದನದ ಲೇಪನದಿಂದ ಏನೂ ಪ್ರಯೋಜನವಿಲ್ಲವೆನ್ನುತ್ತಾಳೆ, ಅನಂತರ ಭಗವಂತನ ಬಳಿಸಾರುತ್ತ, ಪರಿಗ್ರಹಿಸಿರಿ ಶ್ರೀಗಂಧವೆಂದೆನ್ನುತ್ತ ಹೊಂಬಟ್ಟಲನ್ನು ಭಗವಂತನ ಕೈಗಿರಿಸುತ್ತಾಳೆ.

ಕೇಶವ ನಾರಾಯಣ ಗೋವಿಂದ
ಮಾಧವ ಮೇಘಶ್ಯಾಮ ಮುಕುಂದ
ಮೋಹನ ಪುರುಷೋತ್ತಮ ಅರವಿಂದ
ಗೋ ಗೋಪಾಲಕ ಪರಮಾನಂದ
ಗೋವರ್ಧನ ಗಿರಿಧಾರಿ ಮುರಾರಿ
ವನಮಾಲೀ ಪೀತಾಂಬರ ಧಾರಿ
ಕಮಲ ವದನ ಕಮಲಾಕ್ಷ ಶ್ರೀಧರ
ಸಂಕರ್ಷಣ ಶ್ರೀಹರಿ ಮುರಲೀಧರ
ನಾರಾಯಣ ಮಧುಸೂದನ ಮೋಹನ
ವಾಸುದೇವ ಪ್ರದ್ಯುಮ್ನ ಜನಾರ್ದನ
ನಮೋ ನಮೋ ಹೇ ಚಂದ್ರ ಶತಾನನ
ನಮೋ ನಮೋ ನಿಖಿಲಾತ್ಮ ನಿರಂಜನ

ಎಂದೆನ್ನುತ್ತ, ಧ್ಯಾನಕೆ ಸೋಲುವ ದೇವರನ್ನು ಸ್ಮರಿಸುತ್ತ ಶ್ರೀಗಂಧವನ್ನು ಲೇಪಿ

ಸುತ್ತಾಳೆ. ಇದರಿಂದ ಪರಮಾತ್ಮನ ಹೃದಯದಲ್ಲಿ ಆನಂದ ಉಕ್ಕಿ ಏಳುತ್ತದೆ! ಕನಕದಾಸರ ದನಿಯಲ್ಲಿ–

ಕಳವಳಿಸದಿರೇ ಕುಬ್ಜಾಂಗನೆ
ನಾ ಬಂದುದೆ ಬಿಡುಗಡೆಗಾಗಿ

ಎಂದು ಅಭಯ ನೀಡಿ,

ಶ್ರೀಗಂಧಕೆ ಮನ ಸೋತಿಹೆನೆಂದು
ಪ್ರತಿಫಲವಿದೆಕೋ? ಭಿನ್ನಹಕೆ

ಎಂದು ಕುಬ್ಜಾಂಗನೆಯನ್ನು ಆಲಂಗಿಸುತ್ತಾನೆ! "ತ್ರಿವಿಕ್ರಮನಾದ" ಶ್ರೀಕೃಷ್ಣ ಪರಮಾತ್ಮನ ಕಾರುಣ್ಯದ ಸಂಸ್ಪರ್ಶದಿಂದಾಗಿ ಆಕೆಯ ತ್ರಿವಕ್ರತೆ ಅಡಗಿ, ಆಕೆ 'ಅಪ್ಸರೆ' ಯಾಗುತ್ತಾಳೆ! ಪರಮಾತ್ಮನ ಪುಣ್ಯ ಸ್ಪರ್ಶದಿಂದ ಪುನೀತಳಾಗಿ, ಶಾಪ ವಿಮುಕ್ತಳಾಗುತ್ತಾಳೆ. ನಂತರ ಅವಳು ಪರಮಾನಂದ ಭರಿತಳಾಗಿ ಪರಮಾತ್ಮ ಭಕ್ತ ವತ್ಸಲ ಶ್ರೀಕೃಷ್ಣನನ್ನು ಕೇಳುತ್ತಾಳೆ–

ಗೋಪಿಯಾಗಿ ಶ್ರೀಗಂಧವನಿತ್ತೆನು
ರಾಸ ಕ್ರೀಡೆಯು ನಮಗೆಂದು

ಹೀಗೆ ಪರಮಾತ್ಮನಾದ ಶ್ರೀಕೃಷ್ಣನಿಂದ ತ್ರಿವಕ್ರೆ ಅಪ್ಸರೆಯಾಗಿ ಓದುಗರ ಮನಃಪಟಲದಲ್ಲಿ ಅಮರಳಾದ್ದಾಳೆ.

---

(14ನೇ ಪುಟದಿಂದ)

ಆ ಮಗು ಮಲಗಿ ನಿದ್ದೆಮಾಡಿತು. ಆದರೆ ಅರೆನಿದ್ರೆಯಲ್ಲಿ ಕನವರಿಸಿಕೊಳ್ಳತೊಡಗಿತು. "ಶಂಭು, ಬಾ, ನಿನಗೆ ಸ್ವಾಗತ; ಕಮಲಾಸನ ಬಾ, ಇತ್ತ ಎಡಗಡೆ ಕುಳಿತುಕೊ; ಷಣ್ಮುಖ ಬಾ, ಕುಶಲವೇ? ಇಂದ್ರ, ನೀನು ಸುಖವಾಗಿದ್ದೀಯಾ? ಕುಬೇರ. ಬಹಳದಿನಗಳಿಂದ ನೀನು ಕಾಣಲಿಲ್ಲ" ಹೀಗೆ ಕನವರಿಸಿಕೊಂಡದ್ದನ್ನು ಯಶೋದೆ ಕೇಳಿದಳು. "ಏನೋ ಮಗು! ಇದೇನು ಬಡಬಡಿಸುತ್ತೀ?' ಎಂದು. ಭೂತದ ಕಾಟವಿರಬೇಕೆಂದು ಅರಿಷ್ಟ ನಿವಾರಣೆ ಎಸಗಿದಳು, ಅದು ನಮ್ಮನ್ನು ಸಲಹಲಿ.

ಈ ಸನ್ನಿವೇಶವನ್ನು ವಿವರಿಸುವ ಲೀಲಾಶುಕಮುನಿಯ 'ಶಂಭೋಸ್ವಾಗತಂ' ಎಂಬ ಶ್ಲೋಕವನ್ನು ಈಗ ಕೇಳಿ:–

ಬೇಗಡೆ

ಶಂಭೋ ಸ್ವಾಗತಂ, ಆಸ್ಯತಾಂ,
ಇತ ಇತೋವಾಮೇನ ಪದ್ಮಾಸನ।
ಕ್ರೌಂಚಾರೇ ಕುಶಲಂ, ಸುಖಂ ಸುರಪತೇ.
ವಿತ್ತೇಶನೋದೃಶ್ಯಸೇ।
ಇತ್ಥಂ ಸ್ವಪ್ನಗತಸ್ಯ ಕೈಟಭಜಿತಃ
ಶ್ರುತ್ವಾ ಯಶೋದಾಗಿರಃ
ಕಿಂಕಿಂ ಬಾಲಕ ಜಲ್ಪಸಿ
ಇತಿ ರಚಿತಂ ಧೂ ಧೂಕೃತಂ ಪಾತುನಃ

ಸಂಪಕಿಶೋರನಾದ ಕೃಷ್ಣನು ಎಂಥಾ ದಿವ್ಯ ಮೂರ್ತಿ ಎಂದರೆ– ಒತ್ತಾಗಿರುವ ಕಳಾಯ ಪುಷ್ಪದ ಗೊಂಚಲುಗಳಿಂದ ತುಂಬಿದ ಹಾರದಂತೆ ಕಂಗೊಳಿಸುತ್ತಿರುವ ಪ್ರಭಾ ಮಂಡಲ, ಅದರೊಳಗೆ ರಮ್ಯವಾದ, ಪರಮ ರಸಾಸ್ವಾದಿಂದ ರೋಮಾಂಚಿತರಾದ ನಾರದಾದಿಗಳು ಆವರಿಸಿದ್ದಾರೆ. ಆಗತಾನೇ ಕಾರುಣ್ಯಕ್ಕೆ ಕಾಲಿಟ್ಟಿರುವ ಉಪನಿಷತ್ತುಗಳೆಂಬ ಸುಂದರಿಯರ ಮಂಡಲದಿಂದ ಸುತ್ತುವರಿಯಲ್ಪಟ್ಟ ದಿವ್ಯಕಿಶೋರ ವೇಷದಿಂದ ಕೃಷ್ಣ ಕಂಗೊಳಿಸುತ್ತಿದ್ದಾನೆ. ಇಂಥಾ ಶಿಶುವನ್ನು ಕಂಡು ಪರಮಾನಂದ ಸಾಗರದಲ್ಲಿ ನಿಮಗ್ನನಾಗಿರುವ ಕೃಷ್ಣಭಕ್ತ ಕವಿ 'ನಾರಾಯಣ ಭಟ್ಟಾದ್ರಿಯ, 'ಅಗ್ರೇ ಪಶ್ಯಾಮಿ ತೇಜೋ', ಎಂಬ ಶ್ಲೋಕವನ್ನು ಈಗ ಕೇಳಿ:

ಕಾಂಭೋಜ

ಅಗ್ರೇಪಶ್ಯಾಮಿ ತೇಜೋ
ನಿಬಿಡತರಕಲಾಯಾವಲೀಲೋಭನೀಯಂ
ಪೀಯೂಷಾಪ್ಲಾವಿತೋಽಹಂ,
ತದನು ತದುದರೇ ದಿವ್ಯ
ಕೈಶೋರವೇಷಂ॥
ತಾರುಣ್ಯಾರಂಭ ರಮ್ಯಂ,
ಪರಮ ಸುಖರಸಾಸ್ವಾದ
ರೋಮಾಂಚಿತಾಂಗೈಃ।
ಆವೀತಂ ನಾರದಾದ್ಯೈಃ
ವಿಲಸದುಪನಿಷತ್ ಸುಂದರೀ
ಮಂಡಲೈಶ್ಚ॥
(ನಾರಾಯಣೀಯಮ್)

ಕೃಷ್ಣನು ಇನ್ನೂ ದೊಡ್ಡವನಾಗಿ ಗೋವುಗಳನ್ನು ಕಾಯಲಾರಂಭಿಸಿ, ಗೋಪಾಲರೊಂದಿಗೆ ಆಡುತ್ತಾ ಕಾಳಿಂದಿಯ ಮಡುವಿಗೆ ಧುಮುಕಿ ಕಾಳಿಯ ನಾಗನ ಹೆಡೆಯ ಮೇಲೆ ನಾಟ್ಯವಾಡುತ್ತಾನೆ. ಈ ಅದ್ಭುತ ನಾಟ್ಯದ ವರ್ಣನೆಯನ್ನು ದಾಸಶ್ರೇಷ್ಠರ ವಾಣಿಯಲ್ಲಿ ಕೇಳಿ:–

ಆರಭಿ – ಆದಿ

ಆಡಿದನೋ ರಂಗ ಅದ್ಭುತದಿಂದಲಿ।
ಕಾಳಿಂಗನ ಫಣೆಯಲಿ ॥ ಪ ॥
ಪಾಡಿದವರಿಗೆ ಬೇಡಿದ ವರಗಳ।
ನೀಡುತಲಿ ದಯಮಾಡುತಲಿ। ನಲಿ
ದಾಡುತಲಿ ಬೆಣ್ಣೆ ಬೇಡುತಲಿ ಕೃಷ್ಣ
॥ ಅ. ಪ. ॥
ಫಣವನುಟ್ಟಿ ಬಾಲವ ಕೈಯಲಿ ಪಿಡಿದು।
ಘಳ ಘಳಿಸುವ ನಾಟ್ಯವನಾಡೆ।
ಚಂದ್ರಮಂಡಲದಂತೆ ಪೊಳೆಯುವ
ಮುಖದೊಳು।
ಚಲಿಸುವ ನೀಲಕೇಶಗಳಾಡೆ।
ಕಾಲಂದುಗೆ ಗೆಜ್ಜೆ ಘಲು ಘಲುರೆನುತ।
ಉಡಿಗೆಜ್ಜೆ ಗಂಟೆಗಳಾಡೆ ॥ ೧ ॥
ಪುಟ್ಟಪಾದವನಿಟ್ಟು ಶ್ರೀಕೃಷ್ಣನು।
ಮೆಟ್ಟಿದನು ತಕಧಿಮಿ ತಧಿಕೆನುತ।
ಸುರರು ಪುಷ್ಪದ ವೃಷ್ಟಿಯ ಕರೆಯಲು।
ಸುದತಿಯರೆಲ್ಲರು ಪಾಡಲು।
ನಾಗಕನ್ನಿಕೆಯರು ನಾಥನ ಬೇಡಲು।
ನಾನಾವಿಧದಿ ಸ್ತುತಿಮಾಡಲು ॥ ೨ ॥

ಗೋಪಾಲಕೃಷ್ಣನು ಮುರಳೀಧರನಾಗಿ ಗೋಪಿಯರೊಂದಿಗೆ ರಾಸಕ್ರೀಡೆ, ಜಲಕ್ರೀಡೆಗಳಲ್ಲಿ ನಲಿದು ಅವರ ಹೃದಯವನ್ನು ಸೂರೆಗೊಂಡ. ಗೋಪಾಂಗನೆಯರು ಅವನ ದಿವ್ಯಮಂಗಳ ಮೋಹನ ಮೂರ್ತಿಯನ್ನು ನೋಡುತ್ತ ತಮ್ಮ ಮನೆ, ತನು, ಮನ, ಪತಿ, ಸುತರು ಮುಂತಾದ ಸಮಸ್ತವನ್ನೂ ಮರೆತು ಅವನ ಕೊಳಲ ಧ್ವನಿಗೆ ಮರುಳಾಗಿ ಓಡುವರು ಅವನೆಡೆಗೆ. ಅವನ ಕೊಳಲು ಧ್ವನಿ ತುಂಬಿದ ಕೂಡಲೇ ಎಲ್ಲರ ಕೊಳಲು ವೈಕುಂಠವನ್ನು ಒಳಗೊಂಡಿರುವ ಕೊಳಲಾಯಿತು. ದಾಸಶ್ರೇಷ್ಠರ ಒಂದು ಸುಂದರ ಉಗಾಭೋಗವನ್ನು ಈಗ ಕೇಳಿ:–

ಸಾರಂಗ

ಕೊಳಲು, ಕೈಯಲಿ ಕೊಳಲು
ಶ್ರೀಕೃಷ್ಣನ ಕೊಳಲು
ಧ್ವನಿತುಂಬಿ ತಾ ಕೊಳಲು,
ಕೊಳಲು ಕೇಳಿ ಮುತ್ತಿಕೊಳಲು,
ಸರ್ವರ ಕೊಳಲು
ವೈಕುಂಠವ ಒಳಕೊಳಲು ॥

ವಂಶಸ್ತು ಭಗವಾನ್ ರುದ್ರಃ– ಎಂದು ಕೃಷ್ಣೋಪನಿಷತ್ತಿನಲ್ಲಿ ಹೇಳಿರುವಂತೆ ಕೃಷ್ಣನ ಕರಗಳಲ್ಲಿರುವ ಕೊಳಲು ಸಾಕ್ಷಾತ್

ರುದ್ರಸ್ವರೂಪ. ಭಗವಂತನು ಕೃಷ್ಣಾವತಾರ ಮಾಡಿದಾಗ ಈಶ್ವರನಿಗೆ ಸ್ವಲ್ಪ ಯೋಚನೆಗಿಟ್ಟುಕೊಂಡಿತು ತನ್ನ ಮತ್ತು ಕೃಷ್ಣನ ಬಾಂಧವ್ಯ ಹೇಗೆ ಎಂದು ಯೋಚಿಸುತ್ತಿದ್ದಾಗ ಅವನನ್ನು ಸಮಾಧಾನ ಮಾಡುತ್ತಾ 'ನೀನು ನನ್ನ ಕೊಳಲಾಗು. ನಿನ್ನ ನನ್ನ ಬಾಂಧವ್ಯ ಇನ್ನೂ ಸಮೀಪವಾಗಿರಲಿ' ಎಂದು ಅವನನ್ನು ತನ್ನ ಮುರಳಿಯನ್ನಾಗಿ ಕೃಷ್ಣ ಮಾಡಿಕೊಂಡು ತನ್ನ ಮುಖಾರವಿಂದದಿಂದ ಹೊರಹೊಮ್ಮುವ ಪ್ರಣವನಾದದಿಂದ ಅವನನ್ನು ತಣಿಸುತ್ತಿದ್ದ ಎಂದು ಪುರಾಣಗಳು ಹೇಳುತ್ತವೆ.

ಬಾಲಕನಾದ ಮುರಳೀಮೋಹನನ ಕೊಳಲಿನ ನಿನಾದವು ಪ್ರಪಂಚವನ್ನೆಲ್ಲಾ ಅಮರ ಪ್ರೇಮದ ಭಾವೋನ್ಮಾದದಲ್ಲಿ ಮುಳುಗಿಸುತ್ತಿತ್ತು. ವೇದಗಳು ಪ್ರತಿಧ್ವನಿಗೈಯ್ಯುತ್ತಿದ್ದುವು. ವೃಕ್ಷಗಳು ಪಲ್ಲವಿಸಿದುವು. ಪರ್ವತಗಳು ತಮ್ಮ ಕಠಿಣತೆಯನ್ನು ತೊರೆದು ದ್ರವವಾಗಿ ಹರಿದುವು; ಜಿಂಕೆಗಳು ತಮ್ಮ ಆಹಾರವನ್ನು ತೊರೆದು ಮುರಳೀನಾದದಲ್ಲಿ ಮೈಮರೆತವು. ಗೋವೃಂದವು ಅತಿಯಾಗಿ ಆನಂದಿಸಿತು. ಮುರಳೀನಾದವು ಯಾವದಿಕ್ಕಿನಿಂದ ಬರತ್ತಿದೆ ಎಂಬುದನ್ನು ತಿಳಿಯಲಾರದೆ ಗೋಪಾಲರು ಭ್ರಮಿಸುತ್ತಿದ್ದರು. ಮುನಿಗಳು ನಾದಬ್ರಹ್ಮಾನಂದದಿಂದ ಕಣ್ಮುಚ್ಚಿ ಭಾವಸಮಾಧಿಸ್ಥರಾದರು. ಓಂಕಾರದ ಅರ್ಥವನ್ನು ಸಪ್ತಸ್ವರಗಳ ಮೂಲಕ ಆ ವೇಣುಗಾನ ವ್ಯಕ್ತಪಡಿಸುತ್ತಿರುವಂತೆ ಭಾಸವಾಗುತ್ತಿತ್ತು. ಇಂತಹ ಲೋಕೋತ್ತರವಾದ ಶಿಶುವಿಗೆ ಜಯವಾಗಲಿ. ಹೀಗೆ ಬಾಲಕ ಶ್ರೀಕೃಷ್ಣನು ತನ್ನ ವೇಣುಗಾನದಿಂದ ಪ್ರಪಂಚವನ್ನೇ ವಶೀಕರಿಸಿದನು ಎಂದು ವರ್ಣಿಸಿರುವ ಲೀಲಾಶುಕ ಕವಿಯ ವಾಣಿಯನ್ನು ಕೇಳಿ–

(ಮೋಹನ)

ಲೋಕಾನ್ ಉನ್ಮಾದಯನ್,
ಶ್ರುತಿ ಮುಖರಯನ್,
ಕ್ಷೋಣೀರುಹಾನ್ ಹರ್ಷಯನ್,
ಶೈಲಾನ್ ವಿದ್ರಾವಯನ್
ಮೃಗಾನ್ ವಿವಶಯನ್,
ಗೋವೃಂದಂ ಆನಂದಯನ್||

(ಹಮೀರ್ ಕಲ್ಯಾಣಿ)

ಗೋಪಾನ್ ಸಂಭ್ರಮಯನ್
ಮುನೀನ್ ಮುಕುಳಯನ್,
ಸಪ್ತಸ್ವರಾನ್ ಜೃಂಭಯನ್।
ಓಂಕಾರಾರ್ಥಮುದೀರಯನ್
ವಿಜಯತೇ ವಂಶೀನಿನಾದಃ ಶಿಶೋಃ।

ಇದೇ ರೀತಿ ಶ್ರೀಕೃಷ್ಣನ ವೇಣುಗಾನದ ಸೊಬಗನ್ನು ಕುರಿತು ದಾಸಶ್ರೇಷ್ಠರ ವಾಣಿಯನ್ನು ಕೇಳಿ:–

ನಾದನಾಮಕ್ರಿಯ

ರಂಗ ಕೊಳಲನೂದಲಾಗಿ
ಮಂಗಳವಾಯ್ತು ಧರೆ।
ಜಗಂಗಳು ಚೈತನ್ಯ ಮರೆತು
ಅಂಗಪರವಶವಾದುವು || ಪ ||
ಒಡ್ಡ್ಯಾಟ ವೈರವಬಿಟ್ಟು ಖಗಮೃಗ।
ಗಾಢ ನಿದ್ರಾ ಪರವಶವಾದುವು।
ತಳದುದಕ ಉಕ್ಕೇರಿ ಹರಿದುವು।
ತುಳುಕಿಚೆಲ್ಲ್ಯಾಡಿ ಚೆಬಂದಳು ಯಮುನೆ || ೧ || ರಂಗ ||
ಹುಲ್ಲುಕಚ್ಚಿರಲಲ್ಲಿ ನಿಂದುವು ಗೋವ್ಗಳು।
ಪುಚ್ಛವನೆಗಹಿ ನೀಂಟಿಸಿ।
ಧಾಮ ವನಮಾಲೆ ಬಹಿಭೂರ್ಷಿತ।
ಸ್ವಾಮಿ ಪುರಂದರ ವಿಠಲರಾಯನು।
ನಾಮಕ್ರಿಯ ಮೇಘರಂಜನಿಪಾಡೆ।
ಸಾಮವೇದ ನಮೋ ನಮೋ ಎನ್ನೆ || ರಂಗ ||

ಸದ್ಗುರು ತ್ಯಾಗರಾಜರು ವೇಣುಗಾನಲೋಲನಾದ ಶ್ರೀಕೃಷ್ಣನನ್ನು ಈ ರೀತಿ ಸ್ತುತಿಸಿದ್ದಾರೆ. ಅವರ ಗಾನಮೂರ್ತೇ ಎಂಬ ಕೃತಿಯನ್ನು ಕೇಳಿ:–

ಗಾನಮೂರ್ತಿ – ಆದಿ

ಗಾನಮೂರ್ತೇ! ಶ್ರೀಕೃಷ್ಣ ವೇಣು
ಗಾನಮೂರ್ತೇ || ಪ ||
ಮಾನಿನೀಮಣಿ ಶ್ರೀ ರುಕ್ಮಿಣಿ
ಮಾನಸಾಪಹಾರ ಮಾರಜನಕ ದಿವ್ಯ
ಗಾನಮೂರ್ತೇ || ಅ.ಪ. ||
ನವನೀತಚೋರ, ನಂದಸತ್ಕಿಶೋರ।
ನರಮಿತ್ರಧೀರ, ನರಸಿಂಹ ಶೂರ।
ನವಮೇಘತೇಜ, ನಗಜಾಸಹಜ।
ನರಕಾಂತಕ ಜನಿತ ತ್ಯಾಗರಾಜ ||ಸುತ||

ಗೀತಾಚಾರ್ಯನೂ ಭವರೋಗ ವೈದ್ಯನೂ ಆದ ಶ್ರೀಕೃಷ್ಣನ ದಿವ್ಯನಾಮ ಎಂತಹ ದಿವ್ಯಾಷಧ ಎಂಬುದನ್ನು ಪುರಂದರದಾಸರು 'ಇದಕೊಳ್ಳಿ' ಎಂಬ ಕೀರ್ತನೆಯಲ್ಲಿ ಹಾಡಿರುವುದನ್ನು ಕೇಳಿ:–

ಹಿಂದೂಸ್ಥಾನಿ ಕಾಪಿ

ಇದಕೊಳ್ಳಿ ಭವರೋಗ ಕಾಷಧವನು || ಪ ||
ಇಂದ್ರಿಯ ಜಯಿಸುವುದೆ ಇದಕ್ಕೆ
ಇಚ್ಛಾಪಥ್ಯ || ಅ.ಪ. ||
ವಾಸುದೇವನ ನಾಮ ವಾತವಿಧ್ವಂಸಿನಿ।
ಜನಾರ್ದನನ ನಾಮ ಜ್ವರಾಂಕುಶ।
ಮಾಧವನ ನಾಮವೇ ಮನಗಂಡ
ಮಂಡೂರ।
ಮಂಗಳಾತ್ಮನ ನಾಮ ಮಾಲ್ಯವಸಂತ
|| ೧ ||
ಚಿಂತಾಯನಕನಾಮ ತ್ರೈಲೋಕ್ಯ
ಚಿಂತಾಮಣಿ।
ಭುಜಗಶಯನನ ನಾಮ ಭೂಪತಿ
ಮಾತ್ರೆ।
ರಾಜೀವಲೋಚನನ ನಾಮ
ರಸಕರ್ಪೂರ।
ಸೀತಾಪತಿಯ ನಾಮ ದಿವ್ಯ ಸಿಂಧೂರ
|| ೨ ||
ನಾರಾಯಣನ ನಾಮ ದಿವ್ಯ
ತಾಮ್ರಭಸ್ಮ।
ಲೋಕದೊಡೆಯನ ನಾಮ
ಲೋಹಭಸ್ಮ।
ವೈಕುಂಠಪತಿಯೆಂಬ
ವಂಗಭಸ್ಮವಕೊಳ್ಳಿ।
ಶ್ರೀನಿವಾಸನ ನಾಮ ಸ್ವರ್ಣಭಸ್ಮ || ೩ ||
ಇದನು ಕೊಂಡವರ ಪೆಸರನು
ಪೇಳುವೆನು ಕೇಳಿ।
ಮುದದಿ ಪ್ರಹ್ಲಾದ
ಮುಚುಕುಂದ ಧ್ರುವನು।
ಸವಿಮಲೆ ದ್ರೌಪದಿಯು
ಅಜಮಿಳನು ಬದುಕಿದರು।
ಪದುಮಾಕ್ಷ ಪುರಂದರ
ವಿಠಲನೆಂಬ ಔಷಧವು || ೪ ||

ಮಂಗಳ – ಸೌರಾಷ್ಟ್ರ

ಜಯಮಂಗಳಂ ನಿತ್ಯ ಶುಭಮಂಗಳಂ।
ಇಂದೀವರಾಕ್ಷಗೆ ಇಭರಾಜ ವರದಗೆ।
ಇಂದಿರಾರಮಣ ಗೋವಿಂದ ಹರಿಗೆ।
ನಂದನಾಕಂದಗೆ ನವನೀತಚೋರಗೆ
|| ಜಯ ||

ಸುರುಟಿ

ಮಂಗಳಂ ಭಾರತಮಾತೆಗೆ ವರ
ಮಂಗಳಂ ಕರ್ನಾಟಕ ದೇಶಕೆ
ಸುಮಂಗಳಂ ಶ್ರೀ ಲೋಲನಾ ಗೀತ
ರೂಪಕಕೆ।
ಮಂಗಳಂ ವರ ಭಕ್ತವರ್ಗಕೆ
ಸುಮಂಗಳವ ನೀವನಾ ಸಿರಿ ಕೃಷ್ಣ
ಕೇಳ್ವ ಸುಜನರಿಗೆ।

(11 ನೇ ಪುಟದಿಂದ)

ಲೇಖನಿಯನ್ನಾಗಿ ಬಳಸಿಕೊಂಡ ಕಾರಣ "ಏಕದಂತ". ಸಿಂಧುರ ನೆಂಬ ದೈತ್ಯನ ಸಂಹಾರಕ್ಕಾಗಿ ಪ್ರಯೋಗಿಸಿದುದರಿಂದ ಏಕದಂತ. ಹೀಗೆಯೇ 'ಗಜಮುಖ' ನಾಗಲೂ ಹಲವಾರು ಕಾರಣಗಳಿವೆ. ಅನಿರೀಕ್ಷಿತವಾಗಿ ಪಾರ್ವತಿಯ ಬಳಿಗೆ ಬಂದ ಶಿವನನ್ನು ನಿರ್ಭೀತಿಯಿಂದ ತಡೆದುದರಿಂದ, ಆತನ ತ್ರಿಶೂಲಾಘಾತಕ್ಕೆ ಸಿಕ್ಕಿ ಕತ್ತರಿಸಿದ ತಲೆಗೆ ಬದಲಾಗಿ ಅವನಿಂದಲೇ! ಆನೆಯ ತಲೆಯು ಜೋಡಿಸಲ್ಪಟ್ಟಿತು ಎಂಬುದು ಸುಪ್ರಸಿದ್ಧವಾದ ಕಥೆ. ಶನಿದೇವನ ವಕ್ರದೃಷ್ಟಿಯಿಂದ ತಲೆ ಕತ್ತರಿಸಿ ಹೋಗಲು ಗಜ ಶಿರಸ್ಸನ್ನು ಇಡಲಾಯಿತು ಇನ್ನೊಂದು ಕಥೆ

ದ್ರಾವಿಡ ದೇಶದಲ್ಲಿ ಗಣಪತಿಯ ಮುಂದೆ ಕಿವಿ ಹಿಡಿದು ಕುಳಿತೇಳುವ ಸಂಪ್ರದಾಯವಿದೆ. ಇದಕ್ಕೆ 'ದೋರ್ಭಿಃ ಕರ್ಣ' ತೊಪ್ಪುಕರ್ಣ ಎನ್ನುತ್ತಾರೆ. ಗಣಪತಿಯಿಂದ ಹತನಾದ ರಾಕ್ಷಸನೊಬ್ಬನ ಪ್ರಾರ್ಥನೆಯಂತೆ ಗಣೇಶನೇ ಈ ಪದ್ಧತಿಯನ್ನು ಜಾರಿಗೆ ತರಲು ಕಾರಣನಾದನಂತೆ. ಚಕ್ರವನ್ನು ಪಡೆಯಲು ಶ್ರೀಮನ್ನಾರಾಯಣನು ಗಣೇಶನಿಗೆ ಈ ರೀತಿ ವಿನಯವನ್ನು ಪ್ರದರ್ಶಿಸಿದ ಎಂದೂ ಹೇಳುತ್ತಾರೆ.

"ಗಜಾನನ" ರಹಸ್ಯಮಯವೂ, ಸಮಾಸ್ಯಾತ್ಮಕವೂ ಆದ ದೇಹದ ಪ್ರತಿಯೊಂದು ಅವಯವವೂ ಬೋಧಪ್ರದವಾದ ಒಂದೊಂದು ತತ್ತ್ವವನ್ನು ಪ್ರತಿಪಾದಿಸುತ್ತದೆ. ಕೆಟ್ಟದ್ದನ್ನು ಕೇಳಬೇಡ, ಕೆಟ್ಟದ್ದನ್ನು ನೋಡಬೇಡ ಕೆಟ್ಟದ್ದನ್ನು ಆಡಬೇಡ ಎಂಬ ತ್ರಿಸೂತ್ರವನ್ನು ಸರಳವಾಗಿ ಉಪದೇಶಿಸುವ ಉತ್ತಮಾಂಗ ಗಣಪತಿಯ ಗಜ–ವದನ. ಮೊರದಂತಹ ಕಿವಿಯು ಜಳ್ಳನ್ನು ತೂರಿಬಿಡು ಎನ್ನುತ್ತದೆ. ಆದುದರಿಂದಲೇ ಈತನಿಗೆ "ಶೂರ್ಪ–ಕರ್ಣ" ಎಂಬ ನಾಮವು. ಅನ್ವರ್ಥ ಬೃಹತ್ಕಾಯಕ್ಕೆ ತಕ್ಕುದಲ್ಲದ ಚಿಕ್ಕಕಣ್ಣುಗಳು ಕೆಟ್ಟದ್ದನ್ನು ಕಂಡಾಗ ಸಂಕುಚಿತವಾಗಲಿ ಎಂದು ಬೋಧಿಸುತ್ತವೆ. ಬಾಯಿಯ ಮೇಲಿರುವ ಸೊಂಡಿಲು (ಕರ) ಮಾತಿಗೆ ಅಂಕುಶವಿರಲಿ ಎಂಬ ತಿಳುವಳಿಕೆಯನ್ನು ಕೊಡುತ್ತವೆ. ಇದೇ ಗಣಪತಿಯ ಅರ್ಚನೆಗೇ ಮೀಸಲಾದ ದೂರ್ವಾ (ಗರಿಕೆ) ಭಕ್ಷ್ಯವಾದ ಮೋದಕಗಳೂ ತಮ್ಮವೇ ಆದ ಅರ್ಥವಿಶೇಷವನ್ನು ಹೊಂದಿವೆ ಎಂಬುದು ಸೋಜಿಗದ ಸಂಗತಿ.

ಹೀಗೆ ಗಣಪತಿಯ ವಿಚಿತ್ರರೂಪವನ್ನು ವಿಮರ್ಶಕರು ಬಹುವಾಗಿ ವಿಮರ್ಶಿಸಿ ತತ್ತ್ವವನ್ನು ಹೊರಗೆಡಹಿದ್ದಾರೆ ಕೆಲವರು ಈತನನ್ನು ಮಂಗಳಕರವಾದ ಸ್ವಸ್ತಿಕ ಚಿಹ್ನೆಯ ಪ್ರತೀಕ ಎಂದು ಹೇಳಿದರೆ, ಮತ್ತೆ ಕೆಲವರು 'ಓಂಕಾರ' ಎಂದು ಪ್ರತಿಪಾದಿಸುತ್ತಾರೆ. ಒಮ್ಮೆ ಶಿವಪಾರ್ವತಿಯರು, ಸಂತಾನಾಪೇಕ್ಷಿಗಳಾಗಿ ಓಂಕಾರವನ್ನು ಬರೆದು ಧ್ಯಾನಿಸುತ್ತಿರುವಾಗ ಆ ಪ್ರಣವಾಕ್ಷರವನ್ನು ಭೇದಿಸಿಕೊಂಡು ಗಣೇಶನು ಪ್ರತ್ಯಕ್ಷನಾದ ಎಂಬ ಕಥೆಯೂ ಇದೆ.ಯೋಗಿಗಳು ಮೂಲಾಧಾರ ಚಕ್ರವನ್ನು ಗಣಪತಿಯ ವಾಸಸ್ಥಾನವನ್ನಾಗಿ ಭಾವಿಸುತ್ತಾರೆ.

'ಗಣಾನಾಂ, ಈಶ' ಗಣ ಎಂದರೆ ಜನಗಳ ಗುಂಪು. ಅಂದರೆ ಈತ ಒಡೆಯ ಒಟ್ಟಿನಲ್ಲಿ 'ಗಣಪತಿ' ಸಂಘನಾಯಕ. ಇಂದಿನ ನಮ್ಮ ಸಂಘನಾಯಕರೂ ಬುದ್ಧಿವಂತರೂ, ಸಿದ್ಧಿಪ್ರದನೂ ಆದ ಗಣೇಶನ ಆಕಾರಾದಿ ತಾತ್ತ್ವಿಕ ಸ್ವರೂಪವನ್ನು ತಮ್ಮಲ್ಲಿ ಅಳವಡಿಸಿಕೊಂಡು ಸಮಾಜದ ಸರ್ವತೋಮುಖವಾದ ಅಭಿವೃದ್ಧಿಯ ಸಾಧಕರಾಗುವಂತೆ ಗಣೇಶನು ಅನುಗ್ರಹಿಸಲಿ.

---

(10 ನೇ ಪುಟ ದಿಂದ)

೨೦. ಮಂಗಳೂರು, ದಕ್ಷಿಣಕನ್ನಡ ಜಿಲ್ಲೆ:

ಶರವು ಗಣಪತಿಯೆಂದೇ ಖ್ಯಾತಿ. ಜಾಗೃತ ಸ್ಥಳವೆಂದು ಪ್ರಸಿದ್ಧಿ ಪಡೆದು ಭಕ್ತರನ್ನು ದಿನ ನಿತ್ಯವು ಆಕರ್ಷಿಸುತ್ತಿದೆ.

೨೧. ಮಹಾಕೂಟ, ಧಾರವಾಡ ಜಿಲ್ಲೆ:

ಬಾದಾಮಿ ಅರಸರ ಕಾಲದ ಸುಂದರ ಶಿಲ್ಪ. ಪುಷ್ಕರಿಣಿಯ ಮೇಲೆ ಸುಮಾರು 2½ ಅಡಿಗೂ ದೊಡ್ಡದಾದ ಕರುಣಾಮೂರ್ತಿ ಗಣಪನಿದ್ದಾನೆ. ಭಕ್ತರ ಕಲ್ಮಷವನ್ನು ತೆಗೆದು ಅಭೀಷ್ಟವನ್ನು ನೆರವೇರಿಸುವವನಾಗಿದ್ದಾನೆ.

ಹೀಗೆ ಕರ್ನಾಟಕದ ಮೂಲೆ ಮೂಲೆಗಳಲ್ಲೂ ಪ್ರಸಿದ್ಧ ಕಾರಣಿಕ ಗಣಪತಿಗಳ ಮೂರ್ತಿಗಳಿದ್ದು ಅವುಗಳೆಲ್ಲವನ್ನು ವರ್ಣಿಸುವುದು ಹೇಳುವುದು ಅಶಕ್ಯ. ಗಣಪತಿಯ ವರ್ಣನೆ ಯಾರಿಂದಲೂ ಪೂರ್ಣವಾಗಿ ಮಾಡಲು ಸಮರ್ಥರಾಗಿಲ್ಲ. ನಂಜುಂಡ ಕವಿ ಕುಮಾರ ರಾಮ ಸಾಂಗತ್ಯದಲ್ಲಿ ಹೇಳಿದಂತೆ "ನಿನ್ನ ಅನಭಿನುತಿಗೆಯ್ದು ಮೆಚ್ಚಿಸಬಲ್ಲೆನೆ ನೀನೆ ಕೊಡೆನವಿಘ್ನತೆಯ" ಎಂದು ಶರಣಾಗುವುದೇ ಲೇಸು.

ಶ್ರೀ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ "ಶ್ರೀ ಗಣೇಶಸ್ತೋತ್ರ ಸಂಧಿ"ಯನ್ನು ಗಣಪತಿಗೆ ಪ್ರಿಯವಾದ ಇಪ್ಪತ್ತೊಂದು ಪದಗಳಲ್ಲಿ ಹಾಡಿ ಸ್ತುತಿಸಿ, ಕೀರ್ತಿಸಿ ಗಣೇಶನ ಪಾದಾರವಿಂದಗಳಿಗೆ ಅರ್ಪಿಸುತ್ತ.

"ಏಕ ವಿಂಶತಿ ಪದಗಳೆನಿಸುವ ।
ಕೋಕನದದ ಮಾಲಿಕೆಯು ಮೈ ।
ನಾಕಿತನ ಯಾಂತರ್ಗತ
ಶ್ರೀಪ್ರಾಣಪತಿಯೆನಿಪ ॥
ಶ್ರೀಕರ ಜಗನ್ನಾಥ ವಿಠ್ಠಲ ।
ಸ್ವೀಕರಿಸಿ ಸ್ವರ್ಗಾಪವರ್ಗದಿ ।
ತಾ ಕೊಡುವ ಸೌಖ್ಯಗಳ ಭಕುತರಿಗಾವ
ಕಾಲದಲಿ ॥"

ಎಂದು ಶರಣಾಗಿದ್ದಾರೆ. ಅಂತೆಯೇ ಗಣಪತಿಗೆ ಪ್ರಿಯವಾದ ಸಂಖ್ಯೆಯಲ್ಲಿ 21 ಸ್ಥಳದ ಗಣಪತಿ ಕ್ಷೇತ್ರಗಳನ್ನು ಮಾತ್ರ ಹೇಳಿದೆ.

ಕನಕದಾಸರು ವಿನಮ್ರರಾಗಿ ತಮ್ಮ "ಮೋಹನ ತರಂಗಿಣಿ"ಯ ಕಾವ್ಯದಲ್ಲಿ ಹೇಳಿರುವಂತೆ, ಅರ್ಪಿಸಿದಂತೆ, ಈ ಲೇಖನವು ಗಣೇಶನ ಕೆಲಸ ಅವನಿಗೆ ಅರ್ಪಿತ.

ಕಾಯುಕವಿದು ನಿನ್ನದು
ಕೇಳು ನಿರ್ವಿಘ್ನ
ದಾಯಕ ಎನಗೆ ತತ್ಕೃಪೆಯ
ಜೇಯಕಾರುಣ್ಯದಿ ಕಂಡು ಕಂಡು
ಪೊಂಬಳಲ ವಿ
ನಾಯಕ ವಿಶ್ವವಲ್ಲಭನೆ ॥

*

ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಚೇರಿ : 472013
ಮನೆ : 861254

# ನವಶಕ್ತಿ ನಿಲಯ ದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರು ಮಾಡುವ ಸಂಸ್ಥೆ.

1. ಶ್ರೀಚಕ್ರ ಮಹಾಮೇರು (ಪಂಚಲೋಹ)
   16×16 cm ಹಾಗೂ 10×10cm
   4½ × 4½ cm. ರೂ. 350-00
2. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130-00
   (ತಾಪತ್ರಯಗಳನ್ನು ದೂರಮಾಡುವುದು)
3. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
   24×24 cm ರೂ. 1100-00
   (3ತಲೆಮಾರು ಪ್ರಭಾವಬೀರಿ, ಸಂತಸ ಸಂಪತ್ತು ಸುಖ ನೀಡುವುದು)
4. ಶ್ರೀಚಕ್ರ (ಸರ್ವದೇವತೆಗಳೊಂದಿಗೆ)8×8cm ರೂ. 130-00
5. ಸರ್ವಜನ ಮನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
   ಶ್ರೀ ಮಹಾಸುದರ್ಶನಂ 16×48 cm ರೂ. 1650-00
   (ವ್ಯವಹಾರ, ಸಂಪತ್ತು, ಸಂತಸ, ಶಾಂತಿ ಅಭಿವೃದ್ಧಿಗೆ, ಕೆಟ್ಟ ಕಣ್ಣಿನ ದೋಷ ನಿವಾರಣೆಗೆ)
6. ಸರ್ವಜನ ಮನಧನ ಆಕರ್ಷಣ ಸಾಮ್ರಾಜ್ಯಲಕ್ಷ್ಮಿ
   ಶ್ರೀ ಮಹಾಸುದರ್ಶನ ಯಂತ್ರ 8×24 cm ರೂ. 450-00
   (ಮೇಲಿನಂತೆಯೇ)
7. ಶೂಲಿನಿ, ಶರಭೇಶ್ವರ, ಪ್ರತ್ಯಂಗಿರ
   (ಮೂರೂ ಯಂತ್ರಗಳನ್ನು ಒಂದೆಡೆಯಿಟ್ಟಲ್ಲಿ ನವಗ್ರಹದೋಷ ನಿವಾರಣೆ, ಶತ್ರು ಪ್ರಭಾವ ನಾಶ, ಸಂತಸ ಸುಖ, ಹೆಚ್ಚುವುದು)
   16×48 cm ರೂ. 1650-00
   8 × 24 cm ರೂ. 450-00
8. ರಸಮಣಿ, ಪ್ರತಿಯೊಂದೂ ರೂ 250/-, ರೂ 350/-,
   ರೂ 500-00
   (ಏಕಾಗ್ರತೆಗೆ ದೋಹದಕಾರಿ, ಆರೋಗ್ಯವರ್ಧಕ, ಜರಾನಿರೋಧಕ)
9. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ,
   (ಅಪಘಾತ, ಶತ್ರುಗಳಿಂದ ರಕ್ಷಣೆಗೆ) ರೂ. 65-00
10. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65-00
    (ಯಶಸ್ಸು, ಸಂಪತ್ತು ಅಭಿವೃದ್ಧಿಗಳಿಗೆ)
11. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65-00
    (ಅಭೀಷ್ಟ ಸಿದ್ಧಿಗಾಗಿ)
12 ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65-00
    (ಸುಖೀ ದಾಂಪತ್ಯ, ಪತಿ ಆಯುಷ್ಯಕ್ಕೆ)
13. ವಿವಾಹಪ್ರಾಪ್ತಿ ಪದಕ ರೂ. 65-00
    (ಶೀಘ್ರ ವಿವಾಹಕ್ಕಾಗಿ)
14. ಶ್ರೀಚಕ್ರಂ-ಲಕ್ಷ್ಮಿ ಬೀಜದೊಡನೆ ರೂ. 65-00
    (ಅಂಬಾಳ್ ಅನುಗ್ರಹಕ್ಕಾಗಿ)
15. ದೃಷ್ಟಿನಿವೃತ್ತಿ ಯಂತ್ರ ರೂ. 65-00
    (ಮನೆಯಲ್ಲಿ ವ್ಯವಹಾರದ ಸ್ಥಳದಲ್ಲಿ ಚೌಕಟ್ಟು ಹಾಕಿಡುವುದು)
16. ದತ್ತಾತ್ರೇಯ ಯಂತ್ರ 12×12 cm ರೂ. 150-00
    (ಕೆಟ್ಟಕಣ್ಣು ದೋಷ ಪರಿಹಾರಕ್ಕೆ)
17. ರುದ್ರಾಕ್ಷಿಮಾಲೆ, ತುಲಸೀಮಾಲೆ, ಸ್ಫಟಿಕಮಾಲೆ, ವಿದ್ಯುದೀಕೃತ ತಾಮ್ರದಕಡಗ,
18. ಶ್ರೀ ಭುವನೇಶ್ವರೀ ದೇವಿ ಚಿತ್ರ 30×20 cm ರೂ. 20-00

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ ಗೃಹ ಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ 105/- ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ ಕ್ಯಾಟಲಾಗ್ ಉಚಿತ, ವಿದೇಶೀ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.



**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

(18ನೇ ಪುಟದಿಂದ)

ಕಾಳಿಂಗನನ್ನು ತುಳಿದು ಆತನ ಮೇಲೆ ಕುಣಿ ಕುಣಿದು ಮರ್ದನಮಾಡಿದನು. ಇದು ಯಮುನಾ ತೀರದಲ್ಲಿದೆ.

ಒಂದು ದಿನ ಯಶೋದಾಮಾತೆಯು ಕೃಷ್ಣನನ್ನು ಹುಡುಕುತ್ತ ಯಮುನಾತೀರಕ್ಕೆ ಬಂದಳು. ಆತನು ಕಾಣದಂತಾಗಲು ಗೋಪಾಲ, ಗೋಪಾಲ ಎಂದು ಕರೆದಳು. ಈ ಸ್ಥಳವೇ 'ಗೋಪಾಲಘಾಟ'ವು. ತಾಯಿ ಯಶೋದೆಯು ಮಗುವಿನ ರಕ್ಷಣೆಗಾಗಿ ಸೂರ್ಯದೇವನನ್ನು ಪ್ರಾರ್ಥಿಸಿದಳು. ಈ ಸ್ಥಾನವೇ 'ಸೂರ್ಯಘಾಟ'ವೆಂದು ಹೇಳುತ್ತಾರೆ. 'ಪುಷ್ಕರಘಾಟ'ದಲ್ಲಿ ಕೃಷ್ಣನು ತನ್ನ ಓರಗೆಯ ಗೆಳೆಯರೊಡನೆ ಬಂದು ವಿಶ್ರಾಂತಿ ಪಡೆಯುತ್ತಿದ್ದನು. ತನ್ನ ಗೆಳೆಯರೊಡನೆ ಕಣ್ಣಮುಚ್ಚಾಲೆಯಾಟವಾಡಿದ್ದು 'ಆಧಾರಘಾಟ'ದಲ್ಲಿ. 'ಯುಗಲಘಾಟ' ದಲ್ಲಿ ರಾಧಾಕೃಷ್ಣರು ಸ್ನಾನಮಾಡಿ ಜೊತೆಯಾಗಿ ವಿಹರಿಸಿದರು, 'ಬಿಹಾರಘಾಟ'ದಲ್ಲಿ ಗೋಪಿಯರೊಡನೆ ವಿಹಾರ ಮಾಡಿದನು. ಒಂದು ಮಾರ್ಗಶೀರ್ಷಮಾಸದಲ್ಲಿ ಕಾತ್ಯಾಯನೀವ್ರತವನ್ನಾಚರಿಸುತ್ತಿದ್ದ ಗೋಪಿಯರು ತಮ್ಮ ವಸ್ತ್ರಗಳನ್ನೆಲ್ಲ ಕಳಚಿ, ಕದಂಬ ವೃಕ್ಷದಮೇಲಿಟ್ಟಿದ್ದರು. ಅವರು ಯಮುನಾನದಿಯಲ್ಲಿ ಸ್ನಾನಮಾಡಿ, ಕಾತ್ಯಾಯನೀದೇವಿಗೆ ಅರ್ಘ್ಯಕೊಡುತ್ತಿರುವಾಗ ಬಾಲಕೃಷ್ಣನು ಅವರ ವಸ್ತ್ರಗಳನ್ನೆಲ್ಲ ಮುಚ್ಚಿಟ್ಟು ಮಾಯವಾದನು. ಈ ಪ್ರದೇಶವೇ 'ವಸ್ತ್ರಾಪಹರಣಘಾಟ'ವು ಬಾಲಕರೊಡನೆ ಕೂಡಿ ಭ್ರಮರಗಳ ಬೆನ್ನುಹತ್ತಿ ಬಾಲಕ್ರೀಡೆಯಾಡಿದ ಸ್ಥಳವು ಭ್ರಮರಘಾಟವು. ಕೇಶೀನಾಮಕದೈತ್ಯನನ್ನು ಕೊಂದದ್ದು 'ಕೇಶಿಘಾಟ'ದಲ್ಲಿ. ಗೋಪಿಯರ ಮನೆಗಳಿಂದ ಹಾಲು, ಮೊಸರು, ಬೆಣ್ಣೆಗಳನ್ನು ತಂದು ಓರಗೆಯ ಗೆಳೆಯರೊಡನೆ ಕೂಡಿ ಆನಂದದಿಂದ ಮೆದ್ದು ವಿಹರಿಸಿದ ಸ್ಥಳವೇ 'ರಾಜಘಾಟ'ವು. ಈ ಎಲ್ಲ ಘಾಟಗಳು ಯಮುನಾತೀರದಲ್ಲಿವೆ

'ಗೋವರ್ಧನೋದ್ಧರಣ' ಗೋಪಿಯರೊಡನೆ ರಾಸಕ್ರೀಡೆ, ವೇಣುಲೀಲೆ ಮೊದಲಾದವುಗಳು ಈ ವೃಂದಾವನದಲ್ಲಿಯೇ ಜರುಗಿದವು ದುಷ್ಟ ಕಂಸನನ್ನು ಕೊಂದು, ಅನೇಕ ದೈತ್ಯರನ್ನು ಮರ್ದನಮಾಡಿದ ಬಾಲಕೃಷ್ಣನು ಯಮುನಾತಟದಲ್ಲಿಯೇ ವಿಶ್ರಾಂತಿಪಡೆದನು. ಇದೇ ವಿಶಾಲವಾದ 'ವಿಶ್ರಾಂತಿಘಾಟ'ವು. ಸಮೀಪದಲ್ಲಿಯೇ, ಬಾಲಭಕ್ತ ಧ್ರುವನು ತಪಸ್ಸುಮಾಡಿದ ಸ್ಥಳ (ಧ್ರುವ ಟೀಲಾ), ಸಪ್ತರ್ಷಿಟೀಲಾಗಳಿವೆ. ವಿಶ್ರಾಮ ಘಾಟದಲ್ಲಿರುವ ದ್ವಾರಕಾಧೀಶ ಮಂದಿರವು ಅತ್ಯಂತ ಸುಂದರವಾಗಿದೆ. ಅನೇಕ ಭಕ್ತರು, ಯಾತ್ರಿಕರು ಇಲ್ಲಿಗೆ ಬಂದು ಶ್ರೀಕೃಷ್ಣ ಮೂರ್ತಿಯ ದರ್ಶನಪಡೆದು ಹರಕೆಗಳನ್ನು ಸಲ್ಲಿಸುವರು; ಪೂಜಾಉತ್ಸವಾದಿಗಳನ್ನು ಮಾಡಿಸುವರು. ಈ ಮಂದಿರವು ವಲ್ಲಭ ಸಂಪ್ರದಾಯದ್ದಿದೆ.

ಅರ್ಧಚಂದ್ರಾಕಾರವಾಗಿ ಹರಿಯುತ್ತಿರುವ ಪವಿತ್ರ ಯಮುನಾತೀರದಲ್ಲಿ 'ವಿಶ್ರಾಮ ಘಾಟ'ವು ಮಧ್ಯದಲ್ಲಿದ್ದು ಅದರ ಎಡಬಲಗಳಲ್ಲಿ ಘಾಟಗಳು, ಹಾಗೂ ಪವಿತ್ರ ತೀರ್ಥಗಳಿವೆ. ಅವು ವಿಘ್ನರಾಜ ತೀರ್ಥ. ಧಾರಾಪತ್ತನ ತೀರ್ಥ, ದಶಾಶ್ವಮೇಧ ತೀರ್ಥ, ಚಕ್ರತೀರ್ಥ, ಸೋಮತೀರ್ಥ, ಬ್ರಹ್ಮ ತೀರ್ಥ, ಘಂಟಾಭರಣತೀರ್ಥ, ನಾಗತೀರ್ಥ, ವೈಕುಂಠತೀರ್ಥ, ಸಂಯಮನತೀರ್ಥ, ನವತೀರ್ಥ, ಅಮುಕ್ತಾತೀರ್ಥ, ಗುಪ್ತತೀರ್ಥ, ಪ್ರಯಾಗ ತೀರ್ಥ, ಕನಖಲತೀರ್ಥ, ತಿಂದುಲತೀರ್ಥ, ಸೂರ್ಯತೀರ್ಥ, ವಟಸ್ವಾಮೀ ತೀರ್ಥ, ಧ್ರುವ ತೀರ್ಥ, ಋಷಿತೀರ್ಥ, ಮೋಕ್ಷತೀರ್ಥ, ಕೋಟಿ ತೀರ್ಥ ಹಾಗೂ ಬೋಧಿತೀರ್ಥಗಳಿವೆ. ಇವುಗಳಲ್ಲಿ ಭಾವಿಕ ಯಾತ್ರಿಕರು ಮಿಂದು ತಮ್ಮ ಜನ್ಮ ಸಫಲತೆಯನ್ನು ಪಡೆಯುವರು.

ಭಾಗವತ ಭವನ – ಶ್ರೀಕೃಷ್ಣನ ಜನ್ಮಭೂಮಿ (ಮಥುರೆ)ಯಲ್ಲಿ ವಿರಾಜವಾಗಿರುವ ಈ ಭವ್ಯಭವನವು ಐದು ಮಂದಿರಗಳಿಂದ ಕೂಡಿ ಸುಂದರವಾಗಿದೆ. ಶ್ರೀಕೃಷ್ಣನ ಪರಮ ಪವಿತ್ರ ಚರಿತ್ರೆಯನ್ನು ಚಿತ್ರಿಸುವ ವಾಙ್ಮಯವೇ 'ಶ್ರೀಮದ್ಭಾಗವತ'. ವಿಶಾಲವಾದ ಈ ಭವನಕ್ಕೆ 'ಭಾಗವತಭವನ' ಎಂಬ ಹೆಸರು ಸಾರ್ಥಕವಾಗಿದೆ. ರಾಧಾರಮಣ ಮಂದಿರದಲ್ಲಿ ರಾಧಾಕೃಷ್ಣರ ಸುಂದರಮೂರ್ತಿಗಳಿವೆ. ಬಲರಾಮ ಸುಭದ್ರೆಯರ ಮೂರ್ತಿಗಳಿಂದ ಕೂಡಿದ ಜಗನ್ನಾಥಮಂದಿರವಿದೆ. ಎಡಗಡೆ ಶ್ರೀರಾಮಮಂದಿರವಿದೆ. ಎದುರುಗಡೆ ಶ್ರೀಹನುಮಾನಜಿಯು ವಿರಾಜಮಾನರಾಗಿದ್ದಾನೆ. ಸಮೀಪದಲ್ಲಿ ಕೇತವೇಶ್ವರ, ಹಾಗೂ ದೇವೀಮಂದಿರಗಳಿವೆ. ಭಾಗವತದಲ್ಲಿ ವರ್ಣಿಸಿರುವ ಅನೇಕ ಕೃಷ್ಣಲೀಲೆಗಳನ್ನು ಇಲ್ಲಿ ಚಿತ್ರಗಳಲ್ಲಿ ಮೂಡಿಸಿದ್ದಾರೆ. ಈ ಭವನದ ಗೋಡೆಗಳ ಮೇಲೆ ಹಾಗೂ ಮೇಲ್ಛಾವಣಿಯಲ್ಲಿ ಬಣ್ಣಬಣ್ಣದ ಚಿತ್ರಗಳಲ್ಲಿ ಕೃಷ್ಣಲೀಲೆಯ ಪ್ರಸಂಗಗಳನ್ನು ಬರೆದಿದ್ದಾರೆ ಇದನ್ನು ಸಂಪೂರ್ಣವಾಗಿ ನೋಡಿದಾಗ ಶ್ರೀಮದ್ಭಾಗವತವನ್ನು ಓದಿದಂತೆಯೇ ಆಗುವುದು. ಅನೇಕ ಕಲಾವಿಶೇಷಜ್ಞರಿಂದ ನಿರ್ಮಿತವಾದ 'ಭಾಗವತಭವನ'ವು ನಿಜವಾಗಿಯೂ ದರ್ಶನೀಯವಾಗಿದೆ. ಯಮುನಾನದಿಯಲ್ಲಿ ಮಿಂದು ಶ್ರೀ ದ್ವಾರಕಾಧೀಶನ ದರ್ಶನಪಡೆದು ಗೋಕುಲ, ವೃಂದಾವನಗಳ ಯಾತ್ರೆಯಲ್ಲಿ ಜಯಜಗದೀಶಹರೇ ಪ್ರಭುಜಯ ದೀಶಹರೇ' ಎಂದು ಪ್ರಾರ್ಥಿಸುತ್ತ ಸಂಚರಿಸಲು ಬಹುಪುಣ್ಯ.



# ಸಪ್ತಗಿರಿ

ಲೇಖಕರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆಗ ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

(6ನೇ ಪುಟದಿಂದ)

ಪ್ರಸ್ತುತದೊಳೊಗೆದ ಮುಂಬೆಳಗನುಲ ದಂತ ಗ
ಭಸ್ತಿ ನವಪೂರ್ವ ಸಂಧ್ಯಾರುಣಂ ಭಾಳ ವಿ
ನ್ಯಸ್ತ ಸಿಂಧೂರ ಮುಂಕುರಿಪ ಪೊಂಬಿಸಿಲೊಹಸನೆ
ಮೂಡುವೆಳೆ ನೇಸರ ಗಜ॥
ಮಸ್ತಕದ ಮಣಿ ಮುಕುಟಿ ಮಾಗಲುದಯಾ
ಚಲದ
ವಿಸ್ತಾರದಂತೆ ಭದ್ರಾಕೃತಿಯೊಳೊಪ್ಪುವ ಸ
ಮಸ್ತ ಸಿದ್ಧಿ ಪ್ರದಾಯಕ ವಿನಾಯಕ
ಮಾಳ್ಪುದೆಮಗೆ ನಿರ್ವಿಘ್ನತೆಯನು॥

## ಕಮನೀಯ ಪ್ರಭಾ ವಿಸ್ತರನ್

ಕುಮಾರ ವಾಲ್ಮೀಕಿ ಎಂದು ಪ್ರಸಿದ್ಧನಾದ ತೊರವೆಯ ನರಹರಿಗೆ ನಿರಾಡಂಬರದ ಗಣಪತಿಯ ದರ್ಶನವಾಗಿದೆ. ಆದ್ದರಿಂದಲೇ ಅವನ ವರ್ಣನೆಯೂ ನಿರಾಡಂಬರ, ಆದರೆ ಸಾಲಂಕೃತ ಆ ಗಣಪ ಹೀಗಿದ್ದಾನೆ–

ಕರ ಚತುಷ್ಟಯ ಮುದಿತ ಮದ ಸಿಂ
ಧುರ ವಿಭಾನನದಮಲ ಲಂಬೋ
ದರ ನವ ಸಿಂಧುರ ಚಂದನ ಗಂಧ
ಬಂಧುರದ॥
ಉರು ಲಲಾಟದಿ ನರ್ತಿಸುವ ಕಚ
ಭರದ ಕಮನೀಯ ಪ್ರಭಾವಿ
ಸ್ತರದ ವಿನಾಯಕ ಮಾಳ್ಕೆಮಗೆ
ನಿರ್ವಿಘ್ನದಾಯಕವ॥

## ಮಂದರಂಬೋಲ್ ಎಸೆವನ್

ಕವಿ ಷಡಕ್ಷರಿಯು ಗಣಪತಿಯನ್ನು ಕಂಡ ರೀತಿಯೇ ಬೇರೆ. ಇವನು ಗಣಪತಿಯನ್ನು ಮಂದರ ಪರ್ವತಕ್ಕೆ ಹೋಲಿಸಿದ್ದಾನೆ. ಗಣಪತಿಯ ದಂತದ ಕಾಂತಿಯೇ ದೇವತೆಗಳ ಕಿರೀಟದ ಪ್ರಕಾಶದ ನವಧಾತುಗಳು. ಹೊಟ್ಟೆಗೆ ಸುತ್ತಿ ಕೊಂಡಿರುವ ಹಾವೇ ದೇವತೆಗಳು. ಸಮುದ್ರ ಮಥನ ದಂದು ಪರ್ವತಕ್ಕೆ ಬಿಗಿದ ಫಣಿ, ಗಂಡಸ್ಥಳದ ಮದೋದಕವೇ ಸಮುದ್ರ, ಮುಸುಕುತ್ತಿರುವ ದುಂಬಿಗಳೇ ಮೋಡಗಳು. ಈ ವರ್ಣನೆಯಲ್ಲಿ ಕವಿಯ ದೃಷ್ಟಿ ಮತ್ತು ಸೃಷ್ಟಿ ಎರಡೂ ಸಫಲಗೊಂಡಿವೆ. ಅವನು ಹೇಳುವ ಈ ಪದ್ಯ ಹೀಗಿದೆ–

ರದನದ ಕಾಂತಿ ನಿರ್ಜರ ಮುದಗ್ರ ಕಿರೀಟ
ಮಣಿ ಪ್ರಕಾಶನೊಂ
ದಿದ ನವಧಾತು ಬದ್ಧ ಫಣಿಯಂದಮರರ್
ಕಡೆಯಲ್ಕೆ ಕಟ್ಟಿದ
ಗ್ಗದ ಫಣಿ ಗಂಡ ಮಂಡಳ ಮದಾಂಬುಗೆ
ವಾರ್ಧಿರಪುನ್ಮದಾಳಿ ನೀ
ರದ ಮೆನೆ ಮಂದರಂಬೊಲೆಸೆವಾನೆ ಮೊಗಂ
ಮಿಗೆ ಮಾಳ್ಕವಿಘ್ನಮಂ

ರಾಜಶೇಖರ ವಿಳಾಸ ಕಾವ್ಯವನ್ನು ಬರೆಯುವಾಗ ಷಡಕ್ಷರಿಗೆ ಗಣಪತಿಯು ಮಂದರದಂತೆ ಕಂಡರೆ, ಶಬರ ಶಂಕರ ವಿಳಾಸ ಕಾವ್ಯವನ್ನು ಬರೆಯುವಾಗ ಬಾಲಲೀಲಾಲೋಲನಾಗಿ ದರ್ಶನ ಕೊಟ್ಟಿದ್ದಾನೆ. ಗಣಪತಿಯ ಬಾಲಲೀಲೆ ಇಲ್ಲಿ ಅದ್ಭುತ ರಮ್ಯವಾಗಿದೆ. ಮಕ್ಕಳು ಆಡುವ ಮಣ್ಣಿನ ಆಟ ನೀರಿಗಿಳಿದಾಗ ಅವರು ಮಾಡುವ ಪೂತ್ಕಾರ ನೀರಿನಲ್ಲಿ ಕೈಗೆಟುಕಿದ ವಸ್ತುವಿನೊಡನೆ ಆಡುವ ಆಟ, ಈಜಾಟ ಮುಂತಾದವುಗಳ ಸಹಜ ಕಲ್ಪನೆ ಈ ಪದ್ಯದಲ್ಲಿದೆ–

ಕನಕಕ್ಷಾಧರ್ಮ ವಪ್ರದೊಳ್ ನೆಗಲ್ದು
ವಪ್ರ ಕ್ರೀಡೆಯಂ ನೀಳ್ದ ನಾ
ಕನದೀ ವಾರಿಯನೀಂಟಿ ಪೂತ್ಕರಿಸಿ ತತ್
ಪಂಕೇಜಮಂ ಕೊಂಡು ಭೋಂ
ಕನೆ ನೀರಾಟಮನಾಡಿ ಪಾಲ್ಗಡಲೊಳುದ್ಯ
ದ್ವಾಲೀಲಾ ಪ್ರವ
ರ್ತನಮಂ ತಾಳ್ದ ಭವಕ್ತ್ರ ನೀ ಕ್ಷತಿಗಜಸ್ರಂ
ಮಾಳ್ಕೆ ನಿರ್ವಿಘ್ನಮಂ॥

## ಇಕ್ಷುಪ್ರೇಮ

ಪರಮದೇವ ಕವಿ 'ತುರಂಗ ಭಾರತ'–ಎಂಬ ಮಹಾಕಾವ್ಯವನ್ನು ಬರೆದಿದ್ದಾನೆ. ಇಲ್ಲಿ ಇವನಿಗೆ ಗಣಪತಿ ಇಕ್ಷು ಪ್ರೇಮಿಯಾಗಿ ದರ್ಶನ ನೀಡಿದ್ದಾನೆ. ಬೇರೆ ಯಾವ ಕವಿಯೂ ಹೆಚ್ಚಾಗಿ ಹೆಸರಿಸದ ಇಕ್ಷು ಪ್ರೇಮಿಯಾಗಿ ದರ್ಶನ ನೀಡಿದ್ದಾನೆ. ಬೇರೆ ಯಾವ ಕವಿಯೂ ಹೆಚ್ಚಾಗಿ ಹೆಸರಿಸದ ಇಕ್ಷು ಪ್ರೇಮ ಪದವನ್ನು ಈ ಕವಿ ಬಳಸಿದ್ದಾನೆ. ಇಲ್ಲಿಯ ಗಣಪತಿ ಭಕ್ತಾರಾಮ ಕಾಮಕೋಮನ ಪುತ್ರ ಕವಿಯ ವರ್ಣನೆ ಹೀಗಿದೆ–

ಶ್ರೀ ಮಹಾ ಗಣಪ ನಿರ್ವಿಘ್ನತೆಯ ಮಾಡಿಸು
ಕ್ಷೇಮದಿಂದೆನಗೆ ಕಾಮಿತ ಫಲವನಿತ್ತು ನಿ
ಸ್ಸೀಮ ಸುಜನಸ್ತೋಮ ನಮಿತ ಇಕ್ಷುಪ್ರೇಮ
ನಾಮ ಭಕ್ತಾರಾಮನೇ
ಸೋಮಭೂಷಣ ಸಾಮಗಾನ ಭಕ್ತ ಪ್ರೇಮ
ಹೇಮರತ್ನ ಕಿರೀಟಧಾಮ ಶೃಂಗಾರಗುಣ
ಕಾಮಕೋಮನ ಪುತ್ರ ಗಣಪ ಮಾಡೀ
ಕೃತಿಗೆ ಸ್ವಾಮಿ ನಿರ್ವಿಘ್ನತೆಯನು

## ಗುರು ಗಣಾಧೀಶ

ಪರಮದೇವನ ಸಮಕಾಲೀನನಾದ ಮತ್ತೊಬ್ಬ ಹೆಸರಾಂತ ಕವಿ, ಸುಬ್ರಹ್ಮಣ್ಯ. ಇವನ ಕಾವ್ಯ "ಶ್ರೀ ಶರಾವತಿ ಮಹಾತ್ಮೆ" ಇವನೂ ಸಹ ಗಣಪತಿಯನ್ನು ಸುತ್ತಿಸಿದ್ದಾನೆ. ಇವನು ಗಣಪತಿಯನ್ನು ಗುರುವನ್ನಾಗಿ ಮತ್ತು ವಿಘ್ನನಿವಾರಕನನ್ನಾಗಿ ವಣಿಸಿದ್ದಾನೆ–

ಗುರು ಗಣಾಧೀಶನಂ ತರಣಿ ಸಂಕಾಶನಂ
ದುರಿತ ಗಣನಾಶನಂ ದುಷ್ಟಜನ ದೂಷಣಂ
ಸುರಪನುತಿ ತೋಷನಂ ಸದ್ಭಕ್ತ ಪೋಷನಂ
ಕರಿವರದ ವಿಶ್ವೇಶನಂ
ಉರಗಪತಿ ಭೂಷಣಂ ವಿಭ್ರಮ ವಿಲಾಸನಂ
ಕರ ವಿದ್ರುತ ಪಾಶನಂ ಪರ ಮಂದಹಾಸನಂ
ಶರಣು ಹೃದಿವಾಸನಂ ವರದ ವಿಘ್ನೇಶನಂ
ಸ್ಮರಿಸುವೆನು ಮನ್ಮನದೊಳು

## ವಿಘ್ನಕೆ ಶಿಕ್ಷನು

'ಐರಾವತ ನೋಂಪಿ' ಎಂಬುದು ಕನ್ನಡದಲ್ಲಿ ಒಂದು ವಿಶಿಷ್ಟ ರೀತಿಯ ನೋಂಪಿ ಕಾವ್ಯ. ಇದರ ಕರ್ತೃ ಯಾರೆಂಬುದು ಇನ್ನೂ ಸ್ಪಷ್ಟವಾಗಿಲ್ಲ. ಈ ಕವಿ ತನ್ನ ಕಾವ್ಯದ ಆರಂಭದಲ್ಲಿ ಗಣಪತಿಯನ್ನು ಸುತ್ತಿಸಿದ್ದಾನೆ. ಶಿವನು ತ್ರಿಪುರವನ್ನು ನಾಶಮಾಡುವ ಮುನ್ನ ಗಣಪತಿಯನ್ನು ಭಕ್ಷ್ಯಖಾದ್ಯಗಳಿಂದ ತೃಪ್ತಿಪಡಿಸಿ ಅವನ ಅನುಗ್ರಹವನ್ನು ಪಡೆದಿದ್ದಾನೆ. ಆದ್ದರಿಂದ ಗಣಪ, ಸರ್ವ ವಿಘ್ನಗಳನ್ನೂ ನಿವಾರಿಸುವ ಶಕ್ತಿ ಪಡೆದಿದ್ದಾನೆ–ಎಂದು ಕವಿ ವರ್ಣಿಸುತ್ತಾನೆ. ಆ ವರ್ಣನೆ ಹೀಗಿದೆ–

ದಕ್ಷ ತನಯಾತ್ಮಜನು ವಿಘ್ನಕೆ
ಶಿಕ್ಷೆ ನಿಮನೆಂದರುಹಿ ಪರನು ತ್ರಿ
ಯಕ್ಷ ತ್ರಿಪುರವ ಜಯಿಸಲೋಸುಗ
ಮುನ್ನ ಬಲಗೊಂಡು
ಇಕ್ಷು ಚಾಪನ ಜನಕ ದೈತ್ಯರ
ಕುಕ್ಷಿಗಳ ತರಿವಂದು ಬಹುವಿಧ
ಭಕ್ಷ್ಯ ಖಾದ್ಯವನಿತ್ತು ಪೊಲಿಸಿದ ಬೆನಕ
ಗೆರಗುವೆನು॥

## ಭಾಳಲೋಚನ

ಬತ್ತಲೇಶ್ವರ ಕವಿ ತನ್ನ 'ಕೌಶಿಕ ರಾಮಾಯಣ' ಕಾವ್ಯದ ಆದಿಯಲ್ಲಿ ಗಣಪತಿಯನ್ನು ಸ್ಮರಿಸಿ ನಮಿಸಿದ್ದಾನೆ. ಈ ಗಣಪತಿ ಬಾಲ ಹಿಮಕರ ಕಿರಣಗಳಂತೆ ಆಹ್ಲಾದವನ್ನುಂಟು ಮಾಡುವವನು. ತಂದೆಯಾದ ಶಿವನಿಗೆ ಇರುವಂತೆ, ಇವನಿಗೂ ಭಾಳಲೋಚನವಿದೆ. ವರದಹಸ್ತ ಮತ್ತು ಅಭಯ ಹಸ್ತಗಳನ್ನು ಹೊಂದಿದ್ದಾನೆ. ಈಗ ಕವಿಯ ಮಾತಿನಲ್ಲಿಯೇ ಆ ರೂಪದ ರಸಗ್ರಹಣ ಮಾಡೋಣ–

ಬಾಲ ಹಿಮಕರ ಕಿರಣ ಮಂಡಿತ
ಭಾಳಲೋಚನ ರತುನ ಮುಕುಟ ವಿ
ಶಾಲನಾ ಗಜವದನ ವರದಾಭಯ
ಕರಾಂಬುಜನೇ
ಶೈಲಜಾವರ ಪುತ್ರ ಸಕಲ ಸು
ರಾಳಿ ವಂದಿತ ಚರಣ ಕಮಲನೆ
ಪಾಲಿಸೆನ್ನಯ ಮತಿಗೆ ಮಂಗಳವಿತ್ತು
ಗಣನಾಥ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

## ಪುರಹರ ವರತನುಜ

ಸೋಮನಾಥ ಕವಿ ಗಣಪತಿಯನ್ನು ತನ್ನ "ಅಕ್ರೂರ ಚರಿತ್ರೆ" ಯಲ್ಲಿ ದುರಿತ ತರು ನಿರ್ಮೂಲನ, ಶರಣರಘ ಸಂಹಾರ, ಪುರಹರವರ ತನುಜ–ಎಂದು ಹೊಗಳಿದ್ದಾನೆ.

ಪರಶುಧರ ಫಣಿರತ್ನ ಭೂಷಣ
ಕರಿವದನ ಕಮನೀಯ ಲಕ್ಷಣ
ವರದ ಪಾಶಾಂಕುಶ ಲಡ್ಡುಗಳಿಂದ ಕರವೆಸೆವ
ದುರಿತ ತರು ನಿರ್ಮೂಲನ ನಿನ್ನಯ
ಶರಣರಘ ಸಂಹಾರ ಪುರಹರ
ವರತನುಜ ಗಣನಾಥ ಕರುಣಿಸು
ಮತಿಗೆ ಮಂಗಳವ ॥

## ಸಿರಿಡೊಳ್ಳಿನ ಗಣಪ

ಬಜ್ಜೂರು ರಂಗ, ಹೆಚ್ಚು ಪ್ರಸಿದ್ಧಿಗೆ ಬರದ ಕನ್ನಡ ಕವಿಗಳಲ್ಲಿ ಒಬ್ಬ. ಇವನ ಕಾವ್ಯ "ಪರಶುರಾಮರಾಮಾಯಣ". ಇವನ ಗಣಪತಿಗೆ ಮಸ್ತಕದಲ್ಲಿ ದಿವ್ಯ ಮಣಿ ಮುಕುಟವಿದೆ, ಶ್ರುತಿಯಲ್ಲಿ ಚೆಲ್ವ ಕುಂಡಲಗಳಿವೆ, ಮದಚಕ್ಷುವಿದೆ, ಹಸ್ತದಲ್ಲಿ ಮೋದಕವಿದೆ, ಮೋದಕದ ಮೇಲೆ ಸೊಂಡಿಲನ್ನಿರಿಸಿಕೊಂಡಿದ್ದಾನೆ, ಇವನಿಗೆ ಸಿಡಿಡೊಳ್ಳು ಇದೆ. ಮುಖ್ಯವಾಗಿ ಇವನು ಪಾರ್ವತಿಗೆ ಮುಗುಳ್ನಗೆಯನ್ನುಂಟುಮಾಡುವ ಮುದ್ದು ರೂಪದ ರಸಾನುಭವವನ್ನು ಕವಿಯ ಮಾತಿನಿಂದಲೇ ಪಡೆಯೋಣ–

ಶತಕೋಟಿಯುತ ದಿವ್ಯಮಣಿ ಮುಕುಟ
ಮಸ್ತಕದ
ಶ್ರುತಿ ಚೆಲ್ವ ಕುಂಡಲ ಸುಗಂಡಯುಗ
ಮದಚಕ್ಷು
ವತಿ ರಮ್ಯ ಪಾಶಾಂಕುಶದ ಹಸ್ತ ಮೋದಕದ
ಸುಂಡಲಿನ ಸಿರಿಡೊಳ್ಳಿನ
ಅತಿ ಶರಚ್ಚಂದ್ರೋಪಮಾನ ದುರುಧವಲ ರಾ
ಜಿತಮಪ್ಪ ಪರಮೈಕದಂತ ಹೇರಂಬ ಪಾ
ರ್ವತಿಗೆ ನಗೆ ಮುದ್ದೀವ ಸಿದ್ಧಿ ಗಣನಾಯಕ
ನೆಮಗೆ ಬುದ್ಧಿಯಂ ವರ್ಧಿಸೈ ॥

## ತೃಪ್ತಗಣಪ

ನಡುಗನ್ನಡ ಸಾಹಿತ್ಯಯುಗದಲ್ಲಿ ಹೆಚ್ಚು ಬೆಳಕಿಗೆ ಬಾರದ ಕವಿಗಳಲ್ಲಿ ಮುದ್ಗಲನಾಥನೂ ಒಬ್ಬ. ಇವನ ಕಾವ್ಯ 'ಶ್ರೀ ಶೈಲ ಮಹಾತ್ಮೆ'. ಇವನ ಗಣಪ ನಿರಾಡಂಬರಿ, ಆದರೆ ಭಕ್ಷ್ಯಪ್ರಿಯ. ಕಣ್ಣು ಕೋರೈಸುವಂತಹ ಭಕ್ಷ್ಯಗಳನ್ನು ಉಂಡನಂತರ ಇವನು ತೃಪ್ತನಾದಾಗ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿಯೇ ತೀರುತ್ತಾನೆ. ಈ ಭಾವವನ್ನು ಮುದ್ಗಲನಾಥ ಹೀಗೆ ವ್ಯಕ್ತಗೊಳಿಸಿದ್ದಾನೆ–

ಇಕ್ಷು ಕದಳಿಯ ಹಣ್ಣು ಸೇರಿರೆ
ಭಕ್ಷ್ಯಗಳ ನೆರೆತಂದು ಗಣಪನ
ಚಕ್ಷುಗಳು ಕೋರೈಸುವಂತಿರೆ ಮುಂಪೆ
ಗಡಣಿಸುವೆ
ಭಕ್ಷಿಸಿಯೆ ತಣಿದವನ್ನುತ ಕೃಪೆಯಿಂ
ರಕ್ಷಿಸೈ ಹೇರಂಬ ನೀನೇ
ಶಿಕ್ಷಿಸೈ ಕಾವ್ಯವನು ಹೇಳುವ ರಚನೆ
ಸಾರವನು

## ಮೋಹನ ರೂಪ

ಕನ್ನಡದ ಎಲೆಮರೆಯ ಕವಿಗಳಲ್ಲಿ ಶಿವಕವಿಯೂ ಒಬ್ಬ. ಇವನು ವೆಂಕಟಗಿರಿ ಮಹಾತ್ಮೆ ಅಥವಾ ವೆಂಕಟೇಶ ಚರಿತ್ರೆ–ಎಂಬ ಭಾಮಿನಿ ಷಟ್ಪದಿಯ ಕಾವ್ಯವನ್ನು ಬರೆದಿದ್ದಾನೆ. ಪೀಠಿಕಾ ಸಂಧಿಯಲ್ಲಿ ಇವನು ಗಣಪತಿಯನ್ನು ಸ್ತುತಿಸಿದ್ದಾನೆ ಈ ಗಣಪ ಕೋಮಲ ಗಾತ್ರ ಕರುಣಾಳು, ಮೋಹನರೂಪ ವಿಘ್ನವಿನಾಶ ಮಾಡುವುದರಲ್ಲಿ ಮುಂದಾಳು ಶಿವ ಕವಿಯ ಲೇಖನದಿಂದ ಮೂಡಿ ಬಂದ ಆ ಗಣಪ ಹೀಗಿದ್ದಾನೆ–

ಕರಿವದನ ಕರುಣಾಳು ಕಾಮಿತ
ವರದ ಕೋಮಲ ಗಾತ್ರ ನಿರುಪಮ
ಸುರನರೋರಗ ಲೋಕ ಪೂಜಿತ ವಿಶ್ವವಂದಿತನೆ
ತರಣಿ ಶಶಿ ಕೋಟಿ ಪ್ರಕಾಶದಿ
ಮೆರೆವ ಮೋಹನ ರೂಪ ಗಿರಿಜೆಯ
ವರ ಕುಮಾರಕ ವಿಘ್ನನಾಯಕ
ಸತತ ಸಲಹೆನ್ನ

## ಕರುಣಾಸಿಂಧು

ಶ್ರೀ ದೇವೀ ಮಹಾತ್ಮೆ–ಭಾಮಿನಿಷಟ್ಪದಿಯಲ್ಲಿಯ ಬರೆದ ಒಂದು ಕಾವ್ಯ. ಇದರ ಕರ್ತೃ ಯಾರೆಂಬುದು ಇನ್ನೂ ಗೊತ್ತಾಗಿಲ್ಲ. ಈ ಕವಿ ಸಂಸ್ಕೃತದ 'ಸಪ್ತಶತಿ' ಯನ್ನು ಅನುಸರಿಸಿ ಕನ್ನಡದಲ್ಲಿ ಈ ಕಾವ್ಯವನ್ನು ಬರೆದಿದ್ದಾನೆ. ಪೀಠಿಕಾ ಸಂಧಿಯಲ್ಲಿ ಗಣಪತಿಯನ್ನೂ ಸ್ಮರಿಸಿದ್ದಾನೆ. ಈ ಗಣಪ ರತ್ನ ಕಿರೀಟವನ್ನು ಧರಿಸಿದ್ದಾನೆ. ಆ ಕಿರೀಟದ ದೀಪ್ತಿ ಹೊರ ಹೊಮ್ಮಿ ಬರುತ್ತಿದೆ. ಅದು ಹೇಮ ಕುಂಭದಿಂದ ಭಕ್ತರ ಇಷ್ಟಾರ್ಥಗಳನ್ನು ಗಣಪ ನೆರವೇರಿಸಿ ಕೊಡುತ್ತಿದ್ದಾನೆಯೋ ಎನ್ನುವಂತೆ ಕಾಣುತ್ತಿದೆ. ಆ ಪದ್ಯದ ಸೊಗಸು ಹೀಗಿದೆ–

ಶ್ರೀಮದನುಪಮ ಶುಂಡ ಮಂಡಿತ
ಹೇಮ ಕುಂಭದಿ ಸುರಿವ ಭಕುತರ
ಕಾಮಿತಾರ್ಥಗಳಂತೆ ರಂಜಿಪ ರತ್ನಧಾರೆಗಳ
ಪ್ರೇಮ ದಿಂದೊಲಿದೀವ ಗಜ ಮುಖ
ಸೋಮ ಶೇಖರ ಪುತ್ರ ಮಂಗಳ
ಧಾಮ ಕರುಣಾ ಸಿಂಧು ಕೊಡುವುದು
ಮತಿಗೆ ಮಂಗಳವ ॥

## ಶ್ರೀ ಕೈಲಾಸವ ತರುವವನು

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪುರವರಿಗೆ ತಮ್ಮದೇ ಆದ ವಿಶಿಷ್ಟಸ್ಥಾನವಿದೆ. ಇವರಿಗೆ ಗಣಪತಿ ಕಾಣಿಸಿಕೊಂಡ ರೀತಿಯೇ ಭಿನ್ನರೀತಿಯದು. ಇವರ ಗಣಪ ಕೈಲಾಸದಿಂದ ಚೌತಿಯ ದಿನ ಭೂಲೋಕಕ್ಕೆ ಬರುತ್ತಾನೆ. ಅವನು ಬರುವಾಗ ಒಬ್ಬನೇ ಬರುವುದಿಲ್ಲ ಜೊತೆಯಲ್ಲಿ ಗೌರಿಯನ್ನೂ ಕರೆ ತರುತ್ತಾನೆ. ಕನ್ನಡ ನಾಡಿನ ಶಾದ್ವಲಗಳೇ ಅವರಿಗೆ 'ವೇದಿ' ಗಳು. ಅವರು ಕುಳಿತ "ಶಾದ್ವಲ ವೇದಿ" ನಿಜವಾಗಿಯೂ ಕೈಲಾಸವೇ.

ನೀಲವ್ಯೋಮ ವಿಶಾಲ ಪಥದಲಿ ।
ಶ್ರಾವಣ ನೀರದ ನೀಲ ಪಥದಲಿ ।
ಗೌರಿ ಗಣೇಶರು ಬರುವರದೋ
ಭಾದ್ರಪದಾದಿಯ ಶಾದ್ವಲ ವೇದಿಯ
ಶ್ರೀ ಕೈಲಾಸವ ತರುವರದೋ.......... ।

ಹೀಗೆಯೇ ವಿಶಿಷ್ಟ ರೀತಿಯಲ್ಲಿ ಗಣೇಶನನ್ನು ದರ್ಶನ ಮಾಡಿಸುವ ಮತ್ತೊಬ್ಬ ಕವಿ ಶ್ರೀ ಪು. ತಿ. ನ. ರವರು. ಅವರು ಗಣೇಶನೊಡನೆ ಸಂಭಾಷಿಸಿ ನಮಗೆ ಗಣೇಶದರ್ಶನವನ್ನು ಮಾಡಿಸುತ್ತಾರೆ.

## ಇಲಿದೇರ ಬೆನಕ

ಕನ್ನಡ ಸಾಹಿತ್ಯದಲ್ಲಿ ಗದ್ಯಶೈಲಿಗೆ ಸುವರ್ಣ ಚೇತನವನ್ನು ಕೊಟ್ಟ ನರಕವಿ, ಮುದ್ದಣ. ಇವನ ಅದ್ಭುತ ರಾಮಾಯಣ ಒಂದು ರಮ್ಯ ಸರಸ ಕಾವ್ಯ. ಇವನೂ ಗಣಪತಿಯನ್ನು ಸ್ತುತಿಸಿದ್ದಾನೆ. ಆದರೆ ಎಲ್ಲರಂತೆ ಕಾವ್ಯದ ಆದಿಯಲ್ಲಲ್ಲ, ಮಧ್ಯದಲ್ಲಿ ಮುದ್ದಣ ಮನೋರಮೆಯೊಡನೆ ಸಂಭಾಷಿಸುತ್ತಿದ್ದಾಗ ಅನೇಕ ಎಡರುಗಳು ಬರುತ್ತವೆ. ಈ ಎಡರುಗಳ ಪರಿಹಾರಕ್ಕಾಗಿ ಅವನು ಗಣಪನನ್ನು ಪ್ರಾರ್ಥಿಸುತ್ತಾನೆ.

ಆ! ಎಡಗೇಡಿಯನೆ ಮರೆತೆ ಗಡ......ಓ! ಒರ್ಬನೆಯ ಬಿಂಕಣಗಿವಿಯ ಮೂಗೊಂಕು ಮೂಗಿನ ಪೇಕೊಡಲ ಇಲಿದೇರ ಬೆನಕ ಇದೆ, ಮಣಿವೆಂ, ಈ ರಮಣಿಯ...ಪ್ಪ ರತಿದೇವಿಯುಂ ಬಣ್ಣಿಪೊಂದು ಕವನದ ಕಜ್ಜದುಜ್ಜುಗದನಿತೊಂದು ಪೊರ್ತ್ತನೇ ಮಾಳ್ಕೆಯೊಳಂ ಎಡರ್ ಬಾರದಂತು ಕಾವುದು.

## ಇಕ್ಷುಚಾಪನನು ಗೆಲಿದವನು

ದಾಸ ಸಾಹಿತ್ಯಕ್ಕೆ ಬಂದರಂತೂ ಅವನನ್ನು ಹಾಡಿ ಕೊಂಡಾಡದ ಹರಿದಾಸರು ಅಪರೂಪ. ಪುರಂದರ ದಾಸ ತಮ್ಮ ಅನೇಕ ಹಾಡುಗಳಲ್ಲಿ, ಸುಳಾದಿಗಳಲ್ಲಿ ಗಣಪತಿಯನ್ನು ಸ್ತುತಿಸಿದ್ದಾರೆ. ಒಮ್ಮೆ ಅವನನ್ನು 'ಸಿದ್ಧ ಚಾರಣ ಸೇವಿತ' – ಎಂದರೆ ಮತ್ತೊಂದು ಹಾಡಿನಲ್ಲಿ "ವಿದ್ಯಾ ಪ್ರದಾಯಕ" ಎಂದಿದ್ದಾರೆ. ಅಷ್ಟೇ ಅಲ್ಲ ಅವನು ತಟಿಲ್ಲತಾಂಕಿತ ಕೋಮಲಾಂಗ, ಬಟ್ಟ, ಮುತ್ತಿನ ಪದಹಾರನ್, ಇಕ್ಷು ಚಾಪನನ್ನು ಗೆಲಿದವನು, ಪುರಂದರದಾಸರ ಗಣಪತಿ ಇಂದ್ರಿಯ ನಿಗ್ರಹಿಯೂ ಹೌದು.

## ಬಿಗಿದುಟ್ಟ ಚಲ್ಲಣದ ದಿಟ್ಟ

ಕನಕದಾಸರೂ ಸಹ ಗಣಪನನ್ನು ಕೊಂಡಾಡಿದ್ದಾರೆ ಅವರ ಆ ಹಾಡು ಹೀಗಿದೆ–

ಕಮ್ಮಗೋಲನ ವೈರಿ ಸುತನಾದ
ಸೊಂಡಿಲ ಹೆಮ್ಮಯ್ಯ ಗಣನಾಥನೇ
ನೋರೆ ಕಪ್ಪಿನ ಭಾವ ಮೊರದಗಲ ಕಿವಿ
ಕೋರೆದಾಡೆಯವನ್ಯಾರಮ್ಮ
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೇ ಅಮ್ಮಯ್ಯ ।
ಉಟ್ಟ ಪಟ್ಟೆಯ ಬಿಗಿದುಟ್ಟ ಚಲ್ಲಣದ
ದಿಟ್ಟ ತಾನಿವನ್ಯಾರಮ್ಮ
ಶಿವನ ಪಟ್ಟದರಾಣಿ ಪಾರ್ವತಿಯ ಕುಮಾರ ।
ಹೊಟ್ಟೆಯ ಗಣನಾಥನೇ ಅಮ್ಮಯ್ಯ ॥

ಕೀರ್ತನೆಗಳಲ್ಲಿ ಬಿಗಿದುಟ್ಟ ಚಲ್ಲಣದ ದಿಟ್ಟನಾಗಿ ಕಂಡ ಗಣಪತಿ ಕನಕದಾಸರಿಗೆ ಮೋಹನ ತರಂಗಿಣಿಯಲ್ಲಿ ಮತ್ತೊಂದು ರೀತಿಯಲ್ಲಿ ಕಾಣಿಸಿಕೊಂಡಿದ್ದಾನೆ. ಅಲ್ಲಿ ಅವನು ಪೊಂಬಳಲ ವಿನಾಯಕ. ಈ ಹಾಡಿನಲ್ಲಿ ಕನಕದಾಸರ ಅನನ್ಯ ಶರಣತೆಯೂ ಬೆರೆತು ಹೋಗಿದೆ–

ನಾಯಕ ವಿದು ನಿನ್ನದು ಕೇಳು ನಿರ್ವಿಘ್ನ
ದಾಯಕ ಎನಗೆ ಸತ್ಕಪೆಯ
ಜೇಯ ಕಾರುಣ್ಯದಿ ಕಂಡು ಪೊಂಬಲ ವಿ
ನಾಯಕ.........ವಿಶ್ವವಲ್ಲಭನೆ ॥

## ಸೌಂದರ್ಯ ಮೂರ್ತಿ

ತುರಂಗ ಭಾರತ ಕರ್ತೃ ಕವಿ ಪರಮದೇವನಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಅವನು ಕವಿ ಹರಿದಾಸ ಹಾಗೂ ಅವಧೂತ. ಅನೇಕ ಕೀರ್ತನೆಗಳನ್ನು ರಚಿಸುವುದರ ಮೂಲಕ ಸಾಹಿತ್ಯ ದಕ್ಷಯೂ ವಿಶಿಷ್ಟ ಸ್ಥಾನವನ್ನು ಉಳಿಸಿ ಕೊಂಡು ಬಂದಿದ್ದಾನೆ.ಅವನು ವಾಸಿಸುತ್ತಿದ್ದದು, ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಕೇದಿಗೆ ಸರುಹಿನಲ್ಲಿ. ಆ ಸುತ್ತಲ ಎಲ್ಲ ಗಣಪತಿಯ ಮೇಲೂ ಕೀರ್ತನೆಗಳನ್ನು ರಚಿಸಿದ್ದಾನೆ ಒಮ್ಮೆ ಗಣಪತಿಯನ್ನು 'ಪಾವನ ರೂಪ' – ಎಂದು ಕರೆದರೆ, ಮತ್ತೊಂದು ಹಾಡಿನಲ್ಲಿ 'ಜ್ಞಾನದಾಯಕ' ಎಂದು ಸ್ತುತಿಸುತ್ತಾನೆ. ಒಂದು ಹಾಡಿನಲ್ಲಿ 'ಗಿರಿಜೇಶ ಅಜಹರಿ ಪೂಜಿತ' ನಾದರೆ ಇನ್ನೊಂದರಲ್ಲಿ 'ಘನ ಮೂರ್ತಿ' ಯಾಗಿದ್ದಾನೆ. ಇವನ ಗಣಪ ಸರ್ವಾಲಂಕಾರ ಭೂಷಿತನು ಹೌದು. ಭೋಕ್ತೃವೂ ಹೌದು, ಅವನು ಕೇದಿಗೆ ಸರುಹಿನ ಗಣಪತಿಯನ್ನು ಕುರಿತು ಬರೆದ ಹಾಡಿನ ಕೊನೆಯ ಮೂರು ಸಾಲುಗಳು ಹೀಗಿದೆ–

ಅನವರತ ನಿನ್ನ ಕೊಂಡಾಡುವೆನು ಗಣನಾಥ
ಮನಸಿಜಾಂತಕನ ಸುಕುಮಾರ ವಿಖ್ಯಾತ
ಶರಣು ಶರಣು
ಒಡಲಿನೊಳು ಬಿಗಿದು ಸುತ್ತಿದ ವಾಸುಕಿಯ
ಕಟ್ಟು ।
ನಡುವಿಗೊಡ್ಯಾಣ ದಿವ್ಯಾಂಬರವನುಟ್ಟು ।
ಕಡಗ ಕಂಕಣ ಗೆಜ್ಜೆ ಸರ್ವಾಭರಣ ವಿಟ್ಟು ।
ಅಡಿಗಡಿಗೆ ಎಲೆನೊಲೆದು ನಡೆವೆ ಅಡಿಯಿಟ್ಟು
ಒಡೆದ ತೆಂಗಿನಕಾಯಿ ನೆನೆಗಡಲೆ ತಂಬಿಟ್ಟು ।
ಷಡುರಸಾನ್ನವು ಪಂಚ ಕಜ್ಜಾಯ ವಿಟ್ಟು ।
ದೃಢ ಭಕ್ತಿಯಿಂದ ನಿನಗರ್ಪಿಸುವೆ ಮನಸಿಟ್ಟು ।
ಬಿಡದೆ ಸಲಿಸುವುದೆನ್ನ ಮೇಲೆ ದಯವಿಟ್ಟು ॥
ಈ ರೇಳು ಲೋಕಕಾಧಾರ ನೀ ಪ್ರಖ್ಯಾತ ।
ಮಾರಹರ ಸುಕುಮಾರ ಸಕಲಗುಣ ಭರಿತ ।
ಧಾರುಣಿಯೊಳಧಿಕ ಕೇದಿಗೆ ಸರುಹಿನಲಿವಾಸ ।
ಚಾರುತರ ಸೌಂದರ್ಯ ಮೂರ್ತಿ ಗಣನಾಥ
ಶರಣು ಶರಣು ॥

## ಜಾನಪದ ಗಣಪ

ಜನಪದ ಕವಿಗಳಿಗೆ ಗಣಪತಿ ಅಚ್ಚು ಮೆಚ್ಚಿನ ದೇವತೆ ಅವನನ್ನು ಸ್ಮರಿಸದೇ ಇರುತ್ತಾರೆಯೇ? ಇವರು ಗಣಪತಿಯನ್ನು ಒಂದೆಡೆ ಕೂರಿಸಿ, ದೇಗುಲ ಕಟ್ಟಿ, ಅಲಂಕರಿಸಿ ಪೂಜಿಸಿ ಹೊಗಳಿದವರಲ್ಲ. ಅವರಿಗೆ ನಿಂತ ನೆಲವೇ ದೇಗುಲ. ಹಾಡಿದ ಹಾಡೇ ಸ್ತುತಿ. ನೀಡಿದ ವಸ್ತುವೇ ನಿವೇದನೆ. ಅವರು ಎಲ್ಲಿಗೆ ಹೋಗುತ್ತಾರೆ ಅಲ್ಲಿಗೆ ಗಣಪ ಹೋಗುತ್ತಾನೆ. ಅವರು ಯಾವ ರೂಪದಲ್ಲಿ ನೆನೆಯುತ್ತಾರೋ ಆ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಅವರು ಅವನನ್ನು ನೆನೆಯುವುದು ಹೀಗೆ–

ಶರಣು ಶರಣುವಯ್ಯ ಗಣನಾಯ್ಕ ನಮ್ಮ
ಕರುಣದಿಂದಲಿ ಕಾಯೋ ಗಣನಾಯ್ಕ
ಕಳಿಯಡಕೆ ಚಿಗುರೆಲೆ ಗಣನಾಯ್ಕ ನಿಮಗೆ
ಗೊನೆ ಮೇಗ್ಲ ಬಾಳೆಹಣ್ಣು ಗಣನಾಯ್ಕ
ಕರ್ಪೂರ ಸಾಂಬ್ರಾಣಿ ಗಣನಾಯ್ಕ ನಿಮಗೆ
ಒಡೆದ ತೆಂಗಿನ ಕಾಯಿ ಗಣನಾಯ್ಕ

ಹೀಗೆ ಕನ್ನಡದ ಕವಿಗಳು, ಹರಿದಾಸರು, ಜಾನಪದರು ಗಣೇಶನ ದರ್ಶನವನ್ನು ಮಾಡಿ, ಅವನ ಅನುಗ್ರಹದಿಂದ ತಮ್ಮ ಕೃತಿಗಳನ್ನು ಅಮರವನ್ನಾಗಿಸಿ ಕೊಂಡಿದ್ದಾರೆ. ತನ್ಮೂಲಕ ಜಗತ್ತಿಗೆ ಮಂಗಳವನ್ನು ಪ್ರಾರ್ಥಿಸಿದ್ದಾರೆ. ★

(7 ನೇ ಪುಟದಿಂದ)

ಗಳ ಪ್ರೀತ್ಯರ್ಥವಾಗಿ "ಲೈಹರೋಬ" ಎಂದರೆ ದೇವತೆಗಳ ಉತ್ಸವ ಎಂಬ ನರ್ತನ ಪದ್ಧತಿಯನ್ನು ಅನೇಕ ರೂಪಗಳಲ್ಲಿ ಪ್ರಾಚೀನ ಕಾಲದಿಂದ ಪ್ರಯೋಗಿಸುತ್ತ ಬಂದಿದ್ದಾರೆ. ಈ ದೇವತೆಗಳ ನರ್ತನದ ಪ್ರಾರಂಭದಲ್ಲಿಯೇ ಗಣಪತಿ ದೇವತೆಯ ನರ್ತನ ಮಾಡುವರು.

ಕಟ್ಟಿಗೆ ಅಥವಾ ಹಿಟ್ಟಿನ ಮುಖವಾಡ ಹಾಕಿಕೊಂಡು ಕುಣಿಯುವ ಬಿಹಾರದ 'ಚಾ' ನೃತ್ಯವು ಶಿವನ ಸಂಬಂಧವಾದ ನರ್ತನಗಳಿಂದ ಕೂಡಿದೆ. ಮೊದಲಿಗೆ ಮುಖವಾಡ ದರಿಸಿದ ಗಣಪತಿಯು ವೈವಿಧ್ಯ ಪೂರ್ಣವಾಗಿ ಕುಣಿಯುವುದು ವಿಶೇಷ. ಡೋಲಿನ ಶಬ್ದಕ್ಕೆ ಜೊತೆಯಾಗಿ ಹಿನ್ನೆಲೆಯ ಗಾಯಕರ ಭಾವಪೂರ್ಣ ಸಂಗೀತ ವಿರುತ್ತದೆ.

ನಾಟಕಗಳು: ಆಗ್ರಾ, ಮಥುರಾ, ವೃಂದಾವನ ಮೊದಲಾದೆಡೆ ಜನಪ್ರಿಯವಾಗಿರುವ 'ಭಗತ್' ಎಂಬ ನಾಟಕ ಪ್ರಕಾರದಲ್ಲಿ ಪ್ರಾರಂಭದಲ್ಲಿ ಗಣಪತಿ ರಂಗಪ್ರವೇಶಿಸುತ್ತಾನೆ. ಗಜಮುಖ ಧರಿಸಿ ಬಣ್ಣ ಬಣ್ಣಗಳಿಂದ ಅಲಂಕೃತನಾಗಿ ಕುಣಿಯುತ್ತ ಇರುವ ಗಣಪತಿಯನ್ನು ಪೂಜಿಸುತ್ತಾರೆ.

ಮಾಳ್ವ ಪ್ರದೇಶದ 'ಮಚ್' ನಾಟಕಗಳಲ್ಲಿ ಚಿಕ್ಕ ಹುಡುಗ ಗಣೇಶನ ವೇಷ ಹಾಕಿ ಬರುತ್ತಾನೆ. ಕೆಂಪು ಬಟ್ಟೆಯನ್ನು ಹೊದ್ದುಕೊಂಡು ರಂಗಸ್ಥಳದಲ್ಲಿರುವ ಈ ಗಣೇಶನನ್ನು ನಾಟಕಕಾರರು ಆರತಿಯೆತ್ತಿ ಪೂಜಿಸುತ್ತಾರೆ.

ತಂಜಾವೂರಿನ ನಾಟಕ ಮೇಳದಲ್ಲಿ ಭಾಗವತರುಗಳು ರಂಗ ಪ್ರವೇಶಿಸಿದ ನಂತರ ಗಣೇಶನ ಪ್ರವೇಶವಾಗುತ್ತದೆ, ಭಾಗವತರು ವಿಘ್ನೇಶನನ್ನು ಹಾಡಿ ಹೊಗಳಿ ವಿಘ್ನ ತಾರದಂತೆ ಬೇಡಿಕೊಳ್ಳುವರು.

ಆಧುನಿಕ ಮರಾಠಿ ರಂಗಭೂಮಿಯ ಪ್ರವರ್ತಕರಾದ ವಿಷ್ಣುದಾಸ ಭಾವೆ ತನ್ನ ನಾಟಕಗಳಲ್ಲಿ ಗಣಪತಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಮಹಾರಾಷ್ಟ್ರ ಹಾಗೂ ಗೋವಾದಲ್ಲಿ ಪ್ರಚಲಿತವಿರುವ ದಶಾವತಾರ ನಾಟಕಗಳಲ್ಲಿ ಸೂತ್ರಧಾರ ಹಾಗೂ ಉಳಿದವರು ಪದ್ಯಗಳನ್ನು ಹಾಡುವರು. ಇಲ್ಲಿ ಗಣಪತಿ ಒಬ್ಬನೇ ಬರಹೇ ತನ್ನ ಮಡದಿಯರಾದ ವೃದ್ಧಿ ಸಿದ್ಧಿಯರ ಹೆಗಲಿಗೆ ಕೈ ಹಾಕಿಕೊಂಡು ವಿಜೃಂಭಣೆಯಿಂದ ನೃತ್ಯ ಮಾಡುತ್ತಾ ರಂಗಸ್ಥಳಕ್ಕೆ ಬರುವುದು ಕ್ರಮ. ಸೂತ್ರಧಾರ ಗಣಪತಿಯ ಪೂಜೆ ಮಾಡಿ ಆಶೀರ್ವಾದ ಬೇಡುತ್ತಾನೆ. ಗಣಪತಿಯು ಕಾರ್ಯವು ನಿರ್ವಿಘ್ನವಾಗಿ ನೆರವೇರಲೆಂದು ಆಶೀರ್ವದಿಸಿ ಪತ್ನಿಯರೊಡಗೂಡಿ ನರ್ತಿಸುತ್ತಾ ತೆರೆಯ ಮರೆಯಾಗುತ್ತಾನೆ.

ಯಕ್ಷಗಾನ:— ಕರ್ನಾಟಕದ ಕರಾವಳಿ ಜಿಲ್ಲೆಗಳಲ್ಲಿ ಜನಪ್ರಿಯವಾಗಿರುವ ಯಕ್ಷಗಾನ ಬಯಲಾಟಗಳಲ್ಲಿ ಕೂಡ ಗಣಪತಿಗೆ ವಿಶೇಷ ಮಹತ್ವ ಕೊಟ್ಟಿದ್ದಾರೆ. ಪ್ರಾರಂಭದಲ್ಲಿ ಬಣ್ಣದ ಕೋಣೆಯಲ್ಲೇ ಭಾಗವತರು ಗಣಪತಿಯ ಸ್ತುತಿ ಹಾಡುವರು. ನಂತರ ಆಟ ಆರಂಭ ಆಗುವ ಮೊದಲು ನಡೆಯುವ 'ಸಭಾಲಕ್ಷಣ' ಕಾರ್ಯಕ್ರಮದಲ್ಲಿ ಇನ್ನೊಮ್ಮೆ ಗಣಪತಿಯ ಪೂಜೆ ನಡೆಯುವುದು. ಗಣಪತಿಯ ಮುಖವಾಡವನ್ನಾಗಲೀ, ಚಿತ್ರವನ್ನಾಗಲೀ ಇಟ್ಟು ಆರಾಧಿಸುವುದು ರೂಢಿ. ಗಣಪತಿಯ ಮೂರ್ತಿಯನ್ನಾಗಲೀ, ಗಣಪತಿ ವೇಶಧಾರಿಯಾಗಲೀ ರಂಗಸ್ಥಳಕ್ಕೆ ಬರುವ ಪದ್ಧತಿ ಉತ್ತರಕನ್ನಡದಲ್ಲಿಲ್ಲ. ಆ ಪದ್ಧತಿ ಈಗ ಬಿಟ್ಟು ಹೋಗಿದ್ದಿರಬೇಕು. ಹಿಂದಿನ ಯಕ್ಷಗಾನ ಮಂಡಳಿಗಳು ಸವಿಸ್ತಾರವಾಗಿ ಗಣಪತಿಯ ಪೂಜೆ ಮಾಡುತ್ತಿದ್ದರೆ ಈಗಿನ ಮೇಳಗಳು ಸಾಂಕೇತಿಕವಾಗಿ ಕೆಲವೇ ನಿಮಿಷಗಳಲ್ಲಿ ಗಣಪತಿಯ ಪೂಜೆ ಮಾಡಿ ಮುಗಿಸುವುದುಂಟು. ಗಣೇಶ ವಿಜಯ, ಗಣೇಶ ಮಹಾತ್ಮೆ ಇಂಥಹ ಪ್ರಸಂಗಗಳಿದ್ದರೆ ಪ್ರಾರಂಭದಲ್ಲಿ ಮುಖವಾಡ ಧರಿಸಿದ ಗಣಪತಿ ರಂಗಸ್ಥಳಕ್ಕೆ ಬರುವ ವಾಡಿಕೆ ಇದೆ.

ಕೋಲಾಟ, ಸುಗ್ಗಿ ಕುಣಿತ:— ಕರ್ನಾಟಕದ ವಿವಿಧ ಜಾನಪದ ಕಲೆಗಳಾದ ಕೋಲಾಟ, ಸುಗ್ಗಿ ಕುಣಿತ, ಸಂಗ್ಯಾಬಾಳ್ಯಾ ಮೊದಲಾದವುಗಳಲ್ಲಿಯೂ ಗಣಪತಿಗೆ ಗೌರವಸ್ಥಾನ ಸಿಕ್ಕಿರುವದನ್ನು ಗಮನಿಸಬಹುದು. ಕೋಲಾಟದ ಪದ್ಧತಿಯಲ್ಲಿ ಗಣೇಶ ಸ್ತುತಿಯ ಕೋಲು ಎಂಬ ಕ್ರಮವಿದೆ. ಪ್ರತಿಯೊಬ್ಬರೂ ಅವರವರ ಸ್ಥಳದಲ್ಲಿಯೇ ನಿಂತು ಕ್ರಮಬದ್ಧವಾಗಿ ಕೋಲು ಹೊಡೆಯುವದೇ 'ಗಣಪತಿ ಸ್ತುತಿಕೋಲು'.

ಬಯಲಾಟದಲ್ಲಿ ತೆರೆ ಸರಿಸುವ ಮೊದಲೇ ರಂಗಸ್ಥಳದಲ್ಲಿ ಗಣಪತಿಯು ಮಂಡಿಸಿರುತ್ತಾನೆ. ಗಣೇಶನ ಮಡದಿಯರಾದ ವೃದ್ಧಿ ಸಿದ್ಧಿಯರು ಅವನ ಎಡಬಲಗಳಲ್ಲಿ ನಿಂತು ಬೀಸಣಿಕೆ ಬೀಸುತ್ತಾ ಪ್ರಾರ್ಥನೆ ಮಾಡುವರು, ಗಣಪತಿ ಅನುಗ್ರಹ ನೀಡಿದ ಬಳಿಕ ಪ್ರಸಂಗ ಪ್ರಾರಂಭವಾಗುವುದು.

ಗೊಂಬೆಯಾಟ:— ಸೂತ್ರದ ಗೊಂಬೆಯಾಟ ಹಾಗೂ ತೊಗಲುಗೊಂಬೆಯಾಟ ತುಂಬ ಪ್ರಾಚೀನವಾದ ಕಲೆ, ಆಟದ ಪ್ರಾರಂಭದಲ್ಲಿ ಗಣಪತಿ ರೂಪದ ಗೊಂಬೆಯನ್ನು ಸೂತ್ರಧಾರನು ಕುಣಿಸುತ್ತಾನೆ. ದೀಪ ಹಿಡಿದು ಗಣಪತಿಯನ್ನು ವಿವಿಧ ಬಗೆಯಾಗಿ ಪೂಜಿಸುವುದು ಸೂತ್ರಧಾರನ ಕೈ ಚಳಕವನ್ನು ಎತ್ತಿ ತೋರಿಸುವುದು. ಅದರಲ್ಲಿ ಗಣಪತಿ ಪೂಜೆಯ ಪದ್ಯ ಹಾಡುವ ಕ್ರಮವು ಯಕ್ಷಗಾನ ಧಾಟಿಯ ಕ್ರಮದಂತೆ ಇರುವುದು.

ತೊಗಲು ಗೊಂಬೆಯಾಟ ಗೊಂಬೆಯಾಟದ ಇನ್ನೊಂದು ಬಗೆ. ಇದರಲ್ಲಿ ತೆಳ್ಳಗಿನ ತೊಗಲನ್ನು ಜಗ್ಗಿ ಹರವಿ ಅದರ ಮೇಲೆ ರೇಖೆಗಳಿಂದ ಚಿತ್ರ ಬರೆದು ನಡುವೆ ಬಣ್ಣ ತುಂಬಿಸುವರು. ಅನಂತರ ಗೊಂಬೆಯ ಆಕೃತಿಗಳನ್ನು ಕತ್ತರಿಸಿ ತೆಗೆದು ಜೋಡಿಸುವರು. ತೊಗಲು ಗೊಂಬೆಯಾಟದ ಆರಂಭದಲ್ಲಿ ಗಣಪತಿಯ ಚಿತ್ರವನ್ನು ತೋರಿಸಿ ಸೂತ್ರಧಾರನು ಕುಣಿಸುತ್ತಾನೆ. ಗಣಪತಿಯ ಮಾತುಗಳನ್ನೂ ಆಡಿ, ಕೈಗೆ ಗಜ್ಜೆ ಕಟ್ಟಿಕೊಂಡು ಗೊಂಬೆಕುಣಿತದ ಭ್ರಮೆ ಹುಟ್ಟಿಸುತ್ತಾನೆ.



# ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು 30—7—88

* ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಐತಿಹಾಸಿಕತೆ, ಅಲ್ಲಿನ ವಿವಿಧ ಸೇವೆಗಳು, ಯಾತ್ರಿಕ ಸೌಲಭ್ಯಗಳು, ನಿತ್ಯ ಅನ್ನದಾನ ಯೋಜನೆ ಮೊದಲಾದ ಹಿನ್ನೆಲೆಯಲ್ಲಿ ದೂರದರ್ಶನಕ್ಕಾಗಿ ಚಿತ್ರ ತಯಾರಿಸಬೇಕೆಂದು ತೀರ್ಮಾನಿಸಲಾಯಿತು.

* ಮದರಾಸಿನ ವಿ. ವಿ ಆರ್. ಧರ್ಮಶಾಲೆಯ ಹವಾನಿಯಂತ್ರಿತ ಕೊಠಡಿಗಳ ದಿನವಹಿ ಬಾಡಿಗೆಯನ್ನು ಪ್ರತ್ಯೇಕ ವ್ಯಕ್ತಿಗಳಿಗೆ 100 ರೂಪಾಯಿಯೂ ಕುಟುಂಬಗಳಿಗೆ 150 ರೂಪಾಯಿಯೂ ಪರಿಷ್ಕರಿಸುತ್ತ, ತಿ. ತಿ. ದೇ. ಉದ್ಯೋಗಿಗಳಿಗೆ ಹಾಗೂ ಬೋರ್ಡ್ ಸದಸ್ಯರಿಗೆ ದಿನವಹಿಬಾಡಿಗೆಯನ್ನು ಹಳೆಯ ದರಗಳಲ್ಲೇ ಮುಂದುವರಿಸುವುದನ್ನೂ ಅಂಗೀಕರಿಸಲಾಯಿತು.

* ತಿ. ತಿ. ದೇ. ಗಳ ಭದ್ರತಾ ಏರ್ಪಾಡುಗಳನ್ನು ಬಲಗೊಳಿಸಲು 105 ರಕ್ಷಕ ಭಟರ ಹುದ್ದೆಗಳನ್ನುಂಟುಮಾಡಲು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತ.

* ತಿ. ತಿ. ದೇ. ಗಳ ವಾಹನ ವಿಭಾಗದಲ್ಲಿ 9 ವರ್ಷಗಳಿಗೂ ಹೆಚ್ಚು ಬಳಕೆಗೊಂಡ ನಾಲ್ಕು ಹಳೆಯ ಅಂಬಾಸಿಡರ್ ಕಾರುಗಳ್ನು ಸಾರ್ವಜನಿಕ ಹರಾಜಿನ ಮೂಲಕ ಮಾರಾಟಮಾಡಿ ನಾಲ್ಕು ಹೊಸ ಕಾರುಗಳನ್ನು ಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

* ಟಂಗಟೂರಿನಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು 15 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಯಿತು.

* ಕೋದಾಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣದಲ್ಲಿ 12.62 ಲಕ್ಷ ರೂಗಳ ಪುನರ್ವಿಮರ್ಶಿತ ಅಂದಾಜನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* ಪೂರ್ವಗೋದಾವರೀ ಜಿಲ್ಲೆಯ ಕಪಿಲೇಶ್ವರಪುರಂನಲ್ಲಿ ತಿ. ತಿ. ದೇ. ಕಲ್ಯಾಣಮಂಟಪದ ನಿರ್ಮಾಣವೆಚ್ಚದ ಪುನರ್ವಿಮರ್ಶಿತ ಅಂದಾಜು 15.50 ಲಕ್ಷ ರೂಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

* ತಿರುಪತಿಯ ಉತ್ತರಾದಿ ವೈಷ್ಣವಮಠದ ಆಸ್ತಿಯಾದ 4.69 ಎಕರೆ ಜಮೀನನ್ನು ಎಕರೆಗೆ 4 ಲಕ್ಷ ರೂಗಳಂತೆ ಕೊಂಡುಕೊಳ್ಳಲೂ, ಯಾವುದೇ ತಕರಾರೂ ಇಲ್ಲದಂತೆ ಜಮೀನು ತಿ.ತಿ.ದೇ. ಗಳಿಗೆ ಬಂದ ನಂತರ ಹಣ ಸಂದಾಯವಾಗಬೇಕೆಂಡೂ ತೀರ್ಮಾನಿಸಲಾಯಿತು.

* 1988 ರ ವಾರ್ಷಿಕ ಹಾಗೂ ನವರಾತ್ರಿ ಬ್ರಹ್ಮೋತ್ಸವದ ದಿನಗಳಲ್ಲಿ ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಯಡಿಯಲ್ಲಿ ದಿನವೊಂದಕ್ಕೆ 12000 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡಬೇಕೆಂದು ತೀರ್ಮಾನಿಸಲಾಯಿತು.

* ನಂದಿಗಾಮ (ಕೃಷ್ಣ ಜಿಲ್ಲೆ) ದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣಕ್ಕೆ ಕರೆಯಲಾದ ಟೆಂಡರ್‌ಗಳನ್ನು ಪರಿಶೀಲಿಸಿ ಒಪ್ಪಲಾಯಿತು.

* ತಿರುಮಲೆಯ ಸ್ವಾಮಿ ಪ್ರಸಾದವಾದ ಲಾಡುವನ್ನು ತುಂಬುವ ಪಾಲಿಥಿನ್ ಚೀಲಗಳ (ಒಂದೇ ಲಾಡು ತುಂಬುವಂತಹದು 5” × 6” – 75 ಗೇಜ್) ಟೆಂಡರುಗಳಲ್ಲಿ ಅತಿ ಕಡಮೆ ದರದ ಟೆಂಡರನ್ನು ಒಪ್ಪಲು ತೀರ್ಮಾನಿಸಲಾಯಿತು.

* ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ 1988–89ಕ್ಕೆ ಬೇಕಾಗುವ ರೇಷ್ಮೆ ವಸ್ತ್ರಗಳನ್ನು ಕೊಳ್ಳಲು ಟೆಂಡರ್‌ಗಳಲ್ಲಿ ಅತಿಕಡಮೆ ದರದ ಟೆಂಡರ್‌ಗಳನ್ನು ಒಪ್ಪಲಾಯಿತು.

* ಎಮ್ಮಿಗನೂರಿನಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣದಲ್ಲಿನ ಅಂದಾಜು ವೆಚ್ಚ 18 ಲಕ್ಷ ರೂಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

## ಬ್ರಹ್ಮೋತ್ಸವ ಸೌಕರ್ಯಗಳು

1988 ನೇ ಸೆಪ್ಟೆಂಬರ್ (14–9–88 ರಿಂದ 22–9–88) ಹಾಗೂ ಅಕ್ಟೋಬರ್ (10–10–88 ರಿಂದ 19–10–88) ತಿಂಗಳುಗಳಲ್ಲಿ ತಿರುಮಲೆಯಲ್ಲಿ ನಡೆಯುವ ವಾರ್ಷಿಕ ಹಾಗೂ ನವರಾತ್ರಿ ಬ್ರಹ್ಮೋತ್ಸವಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ವಿಸ್ತೃತವಾದ ಏರ್ಪಾಡುಗಳನ್ನುಂಟಾಗಿಸಿದೆ.

* ತಿರುಮಲೆಯ ಆರ್ಟ್ಸ್‌ಸದನ್ ಹಾಲ್‌ನಲ್ಲಿ ನಡೆಸುತ್ತಿದ್ದ ಹರಿಕಥೆ, ಪುರಾಣ ಪಠಣ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸ್ವಾಮಿ ಸನ್ನಿಧಿ ಬೀದಿಯ ನೂತನ ಆಸ್ಥಾನ ಮಂಟಪಕ್ಕೆ ಬದಲಾಯಿಸಲಾಗಿದೆ.
* ತಿ ತಿ.ದೇ. ಧಾರ್ಮಿಕ ಪುಸ್ತಕ ಪ್ರದರ್ಶನ–ಮಾರಾಟವನ್ನೂ ಸಹ ಈ ಆಸ್ಥಾನ ಮಂಟಪದಲ್ಲಿ ಇರುವಂತೆ ಮಾಡಲಾಗಿದೆ.
* ಅನ್ನಮಾಚಾರ್ಯಪ್ರಾಜೆಕ್ಟ್, ದಾಸಸಾಹಿತ್ಯ ಪ್ರಾಜೆಕ್ಟ್‌ನ ಚಿತ್ರಪ್ರದರ್ಶನ ಸಹ ಇಲ್ಲಿ ಏರ್ಪಾಡುಗೊಳಿಸಲಾಗುವುದು.
* ಬ್ರಹ್ಮೋತ್ಸವ ಸಮಯದಲ್ಲಿ ತಿರುಮಲೆ ತಿರುಪತಿಗಳ ಮಧ್ಯದಲ್ಲಿ ಯಾತ್ರಿಕರ ಪ್ರಯಾಣಕ್ಕಾಗಿ ರಾತ್ರಿಹಗಲು ದೊಡ್ಡ ಸಂಖ್ಯೆಯಲ್ಲಿ ಬಸ್ಸುಗಳ ಹೋಗಿ ಬರುವಿಕೆಯ ಏರ್ಪಾಡು.
* ಕಾಲುಹಾದಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಯಾತ್ರಿಕರಿಗೆ ಭದ್ರತಾ ಏರ್ಪಾಡು. ಪ್ರಥಮ ಚಿಕಿತ್ಸಾ ಕೇಂದ್ರಗಳ ಏರ್ಪಾಡು.
* ಬ್ರಹ್ಮೋತ್ಸವ ಸಮಯದಲ್ಲಿ 10 ಸಾವಿರದಿಂದ 12 ಸಾವಿರ ಮಂದಿಗೆ ಉಚಿತ ಭೋಜನ ಸದುಪಾಯ.
* ಯಾತ್ರಿಕರು ಬೆಟ್ಟದ ಮೇಲೆ ತಂಗಲು ಉಚಿತ, ಬಾಡಿಗೆ–ವಸತಿಗಳ ಏರ್ಪಾಟು.

ಯಾತ್ರಿಕರು ಮೇಲ್ಕಂಡ ಸೌಕರ್ಯಗಳ ಸದ್ವಿನಿಯೋಗ ಪಡೆದು ತಿ.ತಿ.ದೇ. ಗಳೊಡನೆ ಸಹಕರಿಸಬೇಕೆಂದು ವಿನಂತಿಸಲಾಗಿದೆ.

ತಿ.ತಿ.ದೇ.

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ



### ನವರಾತ್ರಿ ಬ್ರಹ್ಮೋತ್ಸವಗಳು 10-10-88 ರಿಂದ 19-10-88 ವರೆಗೆ

| | | | |
|---|---|---|---|
| 10-10-88 | ಸೋಮವಾರ | | ಅಂಕುರಾರ್ಪಣೆ |
| 11-10-88 | ಮಂಗಳವಾರ | ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ |
| 12-10-88 | ಬುಧವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 13-10-88 | ಗುರುವಾರ | ಸಿಂಹವಾಹನ | ಮುತ್ತಿನಪಂಜರವಾಹನ |
| 14-10-88 | ಶುಕ್ರವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 15-10-88 | ಶನಿವಾರ | ಮೋಹಿನೀಅವತಾರ | ಗರುಡವಾಹನ |
| 16-10-88 | ಭಾನುವಾರ | ಹನುಮದ್ವಾಹನ, ಸಂಜೆ: ವಸಂತೋತ್ಸವ | ಗಜವಾಹನ |
| 17-10-88 | ಸೋಮವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 18-10-88 | ಮಂಗಳವಾರ | ಬೆಳ್ಳಿಯ ರಥೋತ್ಸವ | ಅಶ್ವವಾಹನ |
| 19-10-88 | ಬುಧವಾರ | ಪಲ್ಲಕಿ ಉತ್ಸವ. ಅವಭೃಥ | ತಿರುಚ್ಚಿವಾಹನ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿರುತ್ತವೆ. ವಿವರಗಳಿಗೆ ನಿಮ್ಮ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ.

ತಿ.ತಿ.ದೇ.

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ ಎ. ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ, ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು.)**

# ವಾರ್ತಾವಳಿ

## ತಿರುಮಲೆಯಲ್ಲಿ ನೂತನ ಕಾಟೇಜುಗಳು

ತಿರುಮಲೆಯ ಅಂಜನಾದ್ರಿ ನಗರ ಪ್ರಾಂತ್ಯದಲ್ಲಿ ಈಗಾಗಲೇ ಇರುವ ವಸತಿಗೃಹಗಳ ಮೇಲಂತಸ್ತುಗಳಲ್ಲಿ ಕಟ್ಟಿದ 100 ಕಾಟೇಜುಗಳನ್ನು (ಒಟ್ಟು ನಿರ್ಮಾಣವೆಚ್ಚ 1.06 ಕೋಟಿ ರೂಗಳು) ಜುಲೈ 31 ರಂದು ತಿ. ತಿ. ದೇ. ಗಳ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾದ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ಉದ್ಘಾಟಿಸಿದರು. ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಜೆ. ಬಾಪುರೆಡ್ಡಿ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ಎಚ್. ವೆಂಕಟಪತಿರಾಜು ಮತ್ತು ಹಲವಾರು ಅಧಿಕಾರಿಗಳು ಈ ಸಂದರ್ಭದಲ್ಲಿ ಹಾಜರಿದ್ದರು.

## ಯಶಸ್ವಿ ಕೋಟಿಕುಂಕುಮಾರ್ಚನೆ

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಜುಲೈ 18 ರಂದು ಆರಂಭವಾದ ಲೋಕಕಲ್ಯಾಣಾರ್ಥವಾದ ಕೋಟಿಕುಂಕುಮಾರ್ಚನೆಯು 21 ದಿನಗಳ ಕಾಲ ನಡೆದು 7–8–88 ರಂದು ಯಶಸ್ವಿಯಾಗಿ ಮುಕ್ತಾಯ ಹೊಂದಿತು. ದಿನವೂ ಸಹಸ್ರಾರು ಮಂದಿ ಭಕ್ತರು ಅತ್ಯುತ್ಸಾಹದಿಂದ ಭಾಗವಹಿಸಿದ ಈ ಅರ್ಚನೆಯಲ್ಲಿ ಇಡೀ ಕಾರ್ಯಕ್ರಮಕ್ಕೆ 5000 ರೂಗಳ ಶುಲ್ಕ ಸಲ್ಲಿಸಿದ 11 ಮಂದಿ ಗೃಹಸ್ಥರೂ, ದಿನದ ಸೇವೆಯಲ್ಲಿ ಪಾಲುಗೊಳ್ಳಲು 300 ರೂ. ಶುಲ್ಕ ನೀಡಿದ 214 ಮಂದಿ ಗೃಹಸ್ಥರೂ ಭಾಗವಹಿಸಿದ್ದರು. 80 ಮಂದಿ ಋತ್ವಿಕರೂ 13 ಮಂದಿ ಪರಿಚಾರಕರೂ ಕಾರ್ಯನಿರ್ವಹಿಸಿದ ಕೋಟಿಕುಂಕುಮಾರ್ಚನೆಯ ಕಡೆಯ ದಿನ ಪೂರ್ಣಾಭಿಷೇಕ, ಸಹಸ್ರಕಲಶಾಭಿಷೇಕ ನಡೆದವು. 24 ಸಾವಿರಕ್ಕೂ ಮಿಕ್ಕಂತೆ ಭಕ್ತರು ಭಾಗವಹಿಸಿದ್ದರು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಹೆಚ್. ವೆಂಕಟಪತಿರಾಜು, ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಹಾಗೂ ಮತ್ತಿತರ ಅಧಿಕಾರಿಗಳೂ ಭಾಗವಹಿಸಿದ್ದರು.

## ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. — ಅಕ್ಟೋಬರ್ 1988**

**ಸನಾತನ ವೃಕ್ಷ ಅಶ್ವತ್ಥ**
—ಸಿದ್ದಾಪುರ ವಾಸುದೇವ ಭಟ್ಟ

**ಶಕ್ತಿದೇವತೆ ಚಾಮುಂಡೇಶ್ವರಿ**
—ಬಿ. ಬಸವರಾಜ ಶೇಟ್

**ಶೃಂಗೇರಿಯ ದೇವಾಲಯಗಳು**
—ಸುರೇಶ ಮೂನ

**ದುರ್ಗೆಯೂ, ರಕ್ತ ಬೀಜನೂ**
—ಎಸ್. ಕಲ್ಯಾಣಿ

**ದುರ್ಗಾಪೂಜೆಯ ಮಹತ್ತ್ವ**
—ಗಣಪತಿಭಟ್ ಅರ್ತಿಕಜೆ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ —

ಸಂಪಾದಕರು
ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

## ಅಕ್ಟೋಬರ್ 1988

| | | |
|---|---|---|
| 2. | ಭಾನುವಾರ | ಗಾಂಧಿಜಯಂತಿ |
| 10. | ಸೋಮವಾರ | ಮಹಾಲಯ ಅಮಾವಾಸ್ಯೆ, ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವ ಅಂಕುರಾರ್ಪಣೆ |
| | | ಶ್ರೀವೇದಾಂತ ದೇಶಿಕರ ಉತ್ಸವಾರಂಭ |
| 11. | ಮಂಗಳವಾರ | ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವಾರಂಭ |
| 15. | ಶನಿವಾರ | " " ಗರುಡೋತ್ಸವ |
| 16. | ಭಾನುವಾರ | ಸರಸ್ವತೀ ಪೂಜೆ |
| 18. | ಮಂಗಳವಾರ | ದುರ್ಗಾಷ್ಟಮಿ ತಿರುಮಲೆಯಲ್ಲಿ ರಜತ ರಥೋತ್ಸವ |
| 19. | ಬುಧವಾರ | ಮಹಾನವಮಿ ನವರಾತ್ರಿಬ್ರಹ್ಮೋತ್ಸವ ಅವಭೃಥ |
| | | ಶ್ರೀ ವೇದಾಂತ ದೇಶಿಕರ ಶಾತ್ತುಮೊರೆ |
| | | ಶ್ರೀ ಪಿಳ್ಳೈಲೋಕಾಚಾರ್ಯರ ವರ್ಷತಿರುನಕ್ಷತ್ರ |
| | | ಶ್ರೀ ಪೊಯ್‌ಗೈ ಆಳ್ವಾರ್ ವರ್ಷ ತಿರುನಕ್ಷತ್ರ |
| 20. | ಗುರುವಾರ | ವಿಜಯದಶಮಿ |
| | | ಶ್ರೀ ಪೂದತ್ತಾಳ್ವಾರ್ ವರ್ಷ ತಿರುನಕ್ಷತ್ರ |
| 21. | ಶುಕ್ರವಾರ | ಶ್ರೀ ಪೇಯಾಳ್ವಾರ್ ವರ್ಷ ತಿರುನಕ್ಷತ್ರ |
| 25. | ಮಂಗಳವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಅನ್ನಾಭಿಷೇಕ |

## ದಂತ ಚಿಕಿತ್ಸಾ ಶಿಬಿರ

ಈಚೆಗೆ ತಿರುಪತಿ — ತಿರುಮಲೆಗಳ ಶಾಲಾ ವಿದ್ಯಾರ್ಥಿಗಳಿಗಾಗಿ ದಂತ ಚಿಕಿತ್ಸಾಶಿಬಿರವನ್ನು ಯಶಸ್ವಿಯಾಗಿ ನಿರ್ವಹಿಸಲಾಯಿತು. ದಂತ ಚಿಕಿತ್ಸಾ ತಜ್ಞ ಡಾ॥ ಎ. ಎಸ್. ನಾರಾಯಣ ಅವರು ಶಿಬಿರದ ನೇತೃತ್ವವನ್ನು ವಹಿಸಿದ್ದರು. 3144 ಮಕ್ಕಳನ್ನು ಪರೀಕ್ಷಿಸಿ, ಅವರಿಗೆ ದಂತ ಧಾವನ, ಆರೋಗ್ಯರಕ್ಷಣಾ ರೀತಿ, ನೀತಿಗಳನ್ನು ವಿವರಿಸಿ, ಔಷಧಗಳನ್ನು ನೀಡಲಾಯಿತು.

ಸದರಿ ಶಿಬಿರವನ್ನು ಆಂಧ್ರಪ್ರದೇಶದ ಅರಣ್ಯ ಇಲಾಖಾಮಂತ್ರಿ ಶ್ರೀ ಗಾಲಿ ಮುದ್ದು ಕೃಷ್ಣಮ ನಾಯುಡು ಅವರು ಉದ್ಘಾಟಿಸಿದರು. ದಂತ ಚಿಕಿತ್ಸಾತಜ್ಞರೂ ಹಲ್ಲುಗಳ ಆಸ್ಪತ್ರೆಯ ಮುಖ್ಯರೂ ಆದ ಶ್ರೀ ಪೀಟರ್ ವೆಸ್ಲಿ ಪೌಲ್ ಅವರು ದಂತಗಳ ಆರೋಗ್ಯ ರಕ್ಷಣೆಯ ಅಗತ್ಯವನ್ನು ಕುರಿತು ಮಾತನಾಡಿದರು. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ ಹೆಚ್. ವೆಂಕಟಪತಿರಾಜು ಅವರ ಅಧ್ಯಕ್ಷತೆಯಲ್ಲಿ ನಡೆದ ಉದ್ಘಾಟನಾ ಸಭೆಯಲ್ಲಿ ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯದ ಡಾ॥ ಕೆ ರಾಜ್ಯಲಕ್ಷ್ಮಿ ಅವರು ಮುಖ್ಯ ಅತಿಥಿಗಳಾಗಿದ್ದರು.

## ಹೊಸ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ

ತಿ. ತಿ. ದೇ. ಗಳಲ್ಲಿ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತ ವರ್ಗಾವಣೆ ಹೊಂದಿದ ಶ್ರೀಮತಿ ಎಸ್. ಅರುಣ ಕುಮಾರಿಯವರ ಪದವಿಯ ಭಾರವನ್ನು ಅನ್ನವರಂ ಶ್ರೀ ವಿ ವಿ. ಎಸ್. ಎಸ್. ದೇವಾಲಯದ ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಜಿ. ಕೃಷ್ಣ ಮೂರ್ತಿ ಅವರು 9-7-88 ರಂದು ಸ್ವೀಕರಿಸಿದ್ದಾರೆ.




Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati - 517501.

